# ಉಡುಪಿ ಶ್ರೀಕೃಷ್ಣ ಕೃತಿ ಮಂಜರೀ

## ಸ್ತೋತ್ರ, ಸುಳಾದಿ, ಕೀರ್ತನಾಸಂಗ್ರಹ.



ಹೆಚ್. ಪಿ. ನಾಗರಾಜರಾವ್

ಶ್ರೀಹರಿ ನಿವಾಸ

ಟಿ. ಬಿ. ರಸ್ತೆ, ಕಡೂರು - 577 548

# ಉಡುಪಿ ಶ್ರೀಕೃಷ್ಣ ಕೃತಿ ಮಂಜರೀ

ಈ ಗ್ರಂಥದ ಎರಡನೇ ಆವೃತ್ತಿಯನ್ನು ವಿಭವ ಸಂ|| ಮಾಘ ಶುದ್ಧ ರಥಸಪ್ತಮೀ ಭಾನುವಾರ (ದಿ. 12-2-1989) ಬೆಂಗಳೂರಿನ ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠ ಶ್ರೀ ಆನಂದ ತೀರ್ಥ ಪ್ರತಿಷ್ಠಾನದ ವತಿಯಿಂದ ನಡೆದ ಸಮಾರಂಭದಲ್ಲಿ ಬಿಡುಗಡೆ ಮಾಡಲಾಯಿತು. ಮತ್ತು ಈ ಕೃತಿ (ಎರಡನೇ ಆವೃತ್ತಿ) ಯನ್ನು ಪೂರ್ಣಪ್ರಜ್ಞ ವಿದ್ಯಾಪೀಠದ ಕುಲಪತಿಗಳಾದ ಉಡುಪಿ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಅರ್ಪಿಸಲಾಗಿದೆ.

ಮೊದಲ ಮುದ್ರಣ 1987. 1000 ಪ್ರತಿಗಳು
ದ್ವಿತೀಯ ಮುದ್ರಣ 1989. 1000 ಪ್ರತಿಗಳು

ಬೆಲೆ : ರೂ. 15-00



ಶ್ರೀಮನ್ ಮಧ್ವಾಚಾರ್ಯರು

# ಪ್ರಸ್ತಾವನೆಗಳು

ಉಡುಪಿ ಶ್ರೀಕೃಷ್ಣದೇವರ ಕೀರ್ತನೆ, ಸುಳಾದಿ, ಸ್ತೋತ್ರಗಳನ್ನು ಒಂದೇ ಸಂಗ್ರಹದಲ್ಲಿ ಪ್ರಕಟಿಸಬೇಕು ಎಂದು ನಿರ್ಧರಿಸಿ ಸಂಗ್ರಹ ಕಾರ್ಯ ಕೈಗೊಂಡಾಗ ವಿದ್ವಾನ್ ಸುರತ್ಕಲ್ ವೆಂಕಟರಾಯಾಚಾರ್ಯರು ಶ್ರೀ ವಾದಿರಾಜರ, ಶ್ರೀ ತುಫಾಕಿ ವೆಂಕಟರಮಣಾಚಾರ್ಯರ, ಶ್ರೀ ಗುರುಗೋವಿಂದ ವಿಠಲರ ಕೃತಿಗಳನ್ನು ಸಂಗ್ರಹಿಸಿ ಕಳುಹಿಸಿ ಕೊಟ್ಟರು. ವೇ ॥ ಶ್ರೀ ॥ ಚಿಕ್ಕೇರೂರು ಗೋವಿಂದಾಚಾರ್ಯರು, ವೇ ॥ ಶ್ರೀ ॥ ಹರಿದಾಸರತ್ನಂ ಗೋಪಾಲದಾಸರು, ಸನ್ಮಾನ್ಯ ಶ್ರೀ ಡಾ॥ಜಿ. ವರದರಾಜರಾಯರು, ಶ್ರೀಆದ್ಯ ರಾಮಾಚಾರ್ಯರು, ಪ್ರೊ॥ ಎಂ ರಾಜಗೋಪಾಲಾಚಾರ್ಯರೂ ಉಡುಪಿ ಶ್ರೀ ಕೃಷ್ಣನ ಕೀರ್ತನಾಕೃತಿಗಳನ್ನು ಕಳುಹಿಸಿರುತ್ತಾರೆ. ಈ ಹಿರಿಯರೆಲ್ಲರಿಗೂ ಕೃತಜ್ಞತೆಯೊಂದಿಗೆ ವಂದನೆ ಸಲ್ಲಿಸುವೆವು. ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆ ಹರಿದಾಸ ಸಾಹಿತ್ಯ ವಿಭಾಗದ ಡಾ. ಟಿ. ಎನ್. ನಾಗರತ್ನರವರೂ ಕೆಲವು ವಿವರಗಳನ್ನು ಕೊಟ್ಟಿರುತ್ತಾರೆ. ಅವರಿಗೂ ಕೃತಜ್ಞತೆ ಸಲ್ಲಿಸುವೆವು. ಉಡುಪಿ ಸೋದೆ ವಾದಿರಾಜ ಮಠಾಧೀಶರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ಸಂಸ್ಕೃತ ಸ್ತುತಿ ಸ್ತೋತ್ರಗಳನ್ನು ಕಳುಹಿಸಿ ಅನುಗ್ರಹ ಸಂದೇಶವನ್ನು ದಯಪಾಲಿಸಿದ್ದಾರೆ. ಶ್ರೀ ಶ್ರೀಗಳವರ ಚರಣಗಳಿಗೆ ಸಾಷ್ಟಾಂಗ ವಂದನೆಗಳು. ಮುದ್ರಣ ಕಾರ್ಯ ನಿರ್ವಹಿಸಿದ ಕಡೂರಿನ ಶ್ರೀ ಗುರುರಾಜ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೆ ಆರ್. ರಾಮಚಂದ್ರರಾವ್‌ರವರಿಗೆ ಅಭಿನಂದನೆಗಳು. ಮುಖಚಿತ್ರ ರಚಿಸಿದ ಕಲಾಕಾರ ಶ್ರೀ ವಿ ಜ ಯ ಕು ಮಾ ರ್ ರವರರಿಗೂ ಅಭಿನಂದನೆಗಳು

ಈ " ಉಡುಪಿ ಶ್ರೀ ಕೃಷ್ಣ ಕೃತಿ ಮಂಜರೀ " ಪ್ರಕಟವಾಗಲು ಆರ್ಥಿಕ ನೆರವು ನೀಡಿರುವ ತಿರುಮಲ–ತಿರುಪತಿ ದೇವಸ್ಥಾನಗಳ ಆಡಳಿತ ಮಂಡಳಿಯವರಿಗೆ ಕೃತಜ್ಞತೆ ಸಲ್ಲಿಸುವೆವು.

**ಹೆಚ್. ಪಿ. ನಾಗರಾಜರಾವ್**

ಮತ್ತು

**ಡಾ. ಕೆ. ಗೋಕುಲನಾಥ್,**

ಎಂ.ಎ , ಪಿ.ಹೆಚ್ ಡಿ.,

# ಪೀಠಿಕೆ

ಭರತಖಂಡವು ಭಗವಂತನ ದಿವ್ಯಸನ್ನಿಧಾನವುಳ್ಳ ನೂರಾರು ತೀರ್ಥಕ್ಷೇತ್ರಗಳಿಂದ
ಪವಿತ್ರವಾಗಿದ್ದು ಇಂದಿಗೂ ಲಕ್ಷಲಕ್ಷ ಪುಣ್ಯಭಿಕ್ಷುಗಳು ಈ ಪವಿತ್ರ ಕ್ಷೇತ್ರಗಳನ್ನು ಸಂದ
ರ್ಶಿಸಿ ಪುನೀತರಾಗುತ್ತಿರುವರು. ಇವುಗಳನ್ನು ಮುಖ್ಯವಾಗಿ ಹರಿಕ್ಷೇತ್ರ ಹಾಗೂ ಹರ
ಕ್ಷೇತ್ರಗಳೆಂದು ವಿಭಾಗಿಸಬಹುದು. ಆಸೇತು ಹಿಮಾಚಲ ಹರಡಿಕೊಂಡಿರುವ ಈ ಕ್ಷೇತ್ರ
ಗಳಲ್ಲಿ ಭಗವಂತನ ಮೂರ್ತಿಗಳು ವಿವಿಧ ಹೆಸರಿನಲ್ಲಿದ್ದು ಆಯಾ ಮೂರ್ತಿಗಳ ಹೆಸರ
ನ್ನು ಕೇಳಿದೊಡನೆ ಭಕ್ತರಿಗೆ ಅನೇಕ ಪೌರಾಣಿಕಕಥೆಗಳು ನೆನಪಿಗೆ ಬರುತ್ತದೆ. ಈಕ್ಷೇತ್ರ
ಗಳ ಪಟ್ಟಿ ದೊಡ್ಡದು, ಆದರೆ ಭಾರತದಲ್ಲಿರುವ ಶ್ರೀ ವಿಷ್ಣುವಿನ ಸನ್ನಿಧಾನವುಳ್ಳ
ಕ್ಷೇತ್ರಗಳಲ್ಲಿ ತಿರುಪತಿ, ಉಡುಪಿ, ಬದರಿ ಮತ್ತು ಪಂಢರಾಪುರ ಮಿಕ್ಕೆಲ್ಲ ಕ್ಷೇತ್ರಗಳಿ
ಗಿಂತಲೂ ಹೆಚ್ಚಿನ ಪ್ರಸಿದ್ಧಿಯನ್ನು ಅಲ್ಲಿನ ಸನ್ನಿಧಾನ ವಿಶೇಷದಿಂದ ಪಡೆದಿರುತ್ತದೆ.
ತಿರುಪತಿ ಮತ್ತು ಪಂಢರಾಪುರಗಳಲ್ಲಿ ಶ್ರೀ ವಿಷ್ಣುವೇ ಸಾಕ್ಷಾತ್ತಾಗಿ ಶಿಲಾರೂಪದಲ್ಲಿ
ನಿಂತು ದರ್ಶಿಸುವ ಭಕ್ತರಿಗೆ ಇಂದಿಗೂ ಅವರವರ ಐಹಿಕಾಮುಷ್ಮಿಕ ಫಲಗಳನ್ನು ನೀಡು
ತ್ತಿರುವನು ಈ ಕ್ಷೇತ್ರಗಳಿಗೆ ಭಾರತಖಂಡದ ಎಲ್ಲಾ ರಾಜ್ಯದ ಎಲ್ಲ ವರ್ಗಗಳ
ಜನರು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ದರ್ಶನಕಾಂಕ್ಷಿತರಾಗಿ ಇಂದಿಗೂ ಆಗಮಿಸುತ್ತಿರು
ವರು. ಈ ಕ್ಷೇತ್ರಗಳ ವಿಶಿಷ್ಟತೆಯು ಕಾರಣದಿಂದ ತಿರುಪತಿಯ ತಿಮ್ಮಪ್ಪನನ್ನು
‘ಕಾಂಚನ ಬ್ರಹ್ಮ” ಎಂದೂ ಪಂಢರಾಪುರದ ವಿಠಲನನ್ನು “ನಾದಬ್ರಹ್ಮ” ಎಂದೂ
ಉಡುಪಿಯ ಶ್ರೀಕೃಷ್ಣನನ್ನು “ಅನ್ನಬ್ರಹ್ಮ” ಎಂದೂ ಕರೆಯುವುದುಂಟು

ತಿರುಪತಿಯ ತಿಮ್ಮಪ್ಪ ಭಕ್ತರಿಂದ ಧನವನ್ನು ಸ್ವೀಕರಿಸಿ, ವರಪ್ರದನಾಗಿರುವುದ
ರಿಂದ ಅವನಿಗೆ “ಕಾಂಚನಬ್ರಹ್ಮ” ಎಂಬ ಹೆಸರೂ, ಪಂಢರಾಪುರದ ವಿಠಲನ ಭಕ್ತರು
ಮೈಮರೆತು ಉಚ್ಚಕಂಠದಿಂದ ಭಜನೆಯನ್ನು ಮಾಡಿದಾಗ ಕೃಪಾದೃಷ್ಟಿ ಹರಿಸುವುದ
ರಿಂದ ವಿಠಲನಿಗೆ “ನಾದಬ್ರಹ್ಮ” ಎಂಬ ಹೆಸರು ಬಂದಿರುವುದಾಗಿ ಹೇಳುತ್ತಾರೆ. ಆದರೆ
ಉಡುಪಿಯ ಶ್ರೀಕೃಷ್ಣನ ವೈಶಿಷ್ಟ್ಯ ಇವೆರಡಕ್ಕಿಂತ ಭಿನ್ನವಾದುದಾಗಿದೆ. ಉಡುಪಿ
ಯಲ್ಲಿ ಶ್ರೀಕೃಷ್ಣನ ಪ್ರಸಾದ ಸ್ವೀಕಾರದಿಂದ ಭಕ್ತರಿಗೆ ವಿಶೇಷಪುಣ್ಯ ಲಭ್ಯವೆನ್ನುತ್ತಾರೆ
ಉಡುಪಿಯಲ್ಲಿ ಭೋಜನ ಮಾಡಿದರೆ ದೊರೆಯುವ ಪುಣ್ಯಸ್ವರೂಪವನ್ನು ವಿಜಯ
ದಾಸರು ವಿವರಿಸುತ್ತಾ “ಭಕ್ಷಗಳ ಮೆಲಲಾಗಿ ಭಕ್ತಿಪುಟ್ಟುವುದಯ್ಯ, ಮೃಷ್ಟಾನ್ನ ಭೋ
ಜನ ಕಷ್ಟನಾಶನ, ಓದನವ ಉದರದೊಳು ತುಂಬಲಾಕ್ಷಣದಲ್ಲಿ ಸಾಧುಗಳ ಸಂಗತಿಘಟಿಸು
ವುದು” ಎಂದು ಹೇಳಿದ್ದಾರೆ. ಉಡುಪಿಯಲ್ಲಿ ಭಕ್ತರು ಹೊಟ್ಟೆತುಂಬ ಊಟಮಾಡಿ
ದರೆ ಶ್ರೀಕೃಷ್ಣನ ಕೃಪೆ ಉಂಟಾಗುವುದೆಂಬ ಪ್ರಸಿದ್ಧ ವಿಷಯವೇ ಶ್ರೀಕೃಷ್ಣನನ್ನು
‘ಅನ್ನಬ್ರಹ್ಮ”ನೆಂದು ಕರೆಯಲು ಮುಖ್ಯ ಕಾರಣವಾಗಿದೆ.

ನವರಾತ್ರಿಯಲ್ಲಿ ತಿರುಪತಿಯಲ್ಲಿ ನಡೆಯುವ ಬ್ರಹ್ಮೋತ್ಸವಕ್ಕೂ ಆಷಾಡ ಶುದ್ಧ ಏಕಾದಶಿಯ ದಿನ ವಿಠಲನ ದರ್ಶನಕ್ಕೂ, ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆಯುವ ಪರ್ಯಾಯೋತ್ಸವ ಪ್ರತಿವರ್ಷ ನಡೆಯುವ ಚೂರ್ಣೋತ್ಸವದ ವಿಶೇಷ ಪೂಜಾ ಸಮಾರಂಭಕ್ಕೂ ಇಂದಿಗೂ ಲಕ್ಷ ಸಂಖ್ಯೆಯನ್ನು ಮೀರಿ ಭಕ್ತರು ಉತ್ಸವದಲ್ಲಿ ಭಾಗಿಗಳಾಗುತ್ತಿರುವುದೇ ಈ ಮೂರು ಕ್ಷೇತ್ರಗಳ ಪವಿತ್ರತೆಯನ್ನು ಸಾಬೀತುಪಡಿಸುತ್ತಿದೆ. ಭಗವಂತನಿಗಿರುವ ಅನಂತ ನಾಮಗಳಲ್ಲಿ ಕೃಷ್ಣನಾಮ ಸ್ಮರಣೆಗೆ ವಿಶಿಷ್ಟ ಸ್ಥಾನವಿದೆ, ಪ್ರತಿಯೊಂದು ಕರ್ಮವನ್ನು ಮಾಡಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಕೃಷ್ಣನಿಗೆ ಅರ್ಪಿಸುವುದು ಸಾಧನೆಯ ಮಾರ್ಗವಾಗಿದೆ, "ಶ್ರೀಕೃಷ್ಣಾರ್ಪಣಮಸ್ತು" ಎಂದು ಹೇಳಿದೆ. ಯಾವ ಭಕ್ತರೂ ಯಾವ ಸತ್ಕರ್ಮವನ್ನು ಕೊನೆಗಾಣಿಸುವುದಿಲ್ಲ. ಶ್ರೀಹರಿಯು ಕೃಷ್ಣಾವತಾರವನ್ನು ತಾಳಿದಾಗ ಭಕ್ತರಿಗೆ ಅನುಗ್ರಹಿಸಿದ ರೀತಿಯೇ ಇದಕ್ಕೆ ಕಾರಣವಾಗಿದೆ. ಇತರ ಅವತಾರಗಳಿಗಿಂತ ಕೃಷ್ಣಾವತಾರದಲ್ಲಿ ಶ್ರೀ ಹರಿಯು ಭಕ್ತರ ಐಹಿಕಾಮುಷ್ಮಿಕ ಆಸೆಗಳನ್ನು ನೆರವೇರಿಸಿದ ಕಥೆ ಅಧಿಕವಾಗಿದೆ. ಕೃಷ್ಣ ವಿಶ್ವಕುಟುಂಬಿಯಾಗಿ ಚಿಕ್ಕವರ, ದೊಡ್ಡವರ, ಪುರುಷರ ಹಾಗೂ ಸ್ತ್ರೀಯರ ಆಸೆಗಳನ್ನು ನೆರವೇರಿಸಿ "ಅತಿಸುಲಭ"ನೆನಿಸಿಕೊಂಡಿದ್ದಾನೆ ಪಾಂಡವರಿಗಿಂತಲೂ ಶ್ರೀಕೃಷ್ಣ ನಾನಾ ರೀತಿಯಲ್ಲಿ ಅವರ ಭಕ್ತಿಗೆ ಮೆಚ್ಚಿ ಕಾರುಣ್ಯ ವರ್ಷವನ್ನು ಸುರಿಸಿದ ಕಥೆ ಮಹಾಭಾರತದಲ್ಲಿದೆ. ಶ್ರೀಮನ್ಮಹಾಭಾರತದ ಪಾತ್ರಗಳಲ್ಲಿ ಎಲ್ಲಕ್ಕಿಂತ ಮುಖ್ಯಪಾತ್ರ ಶ್ರೀಕೃಷ್ಣನೇ ಎಂಬ ಸಿದ್ಧಾಂತವನ್ನೊಪ್ಪಿದ ಕನ್ನಡದ ಮಹಾಕವಿ ಕುಮಾರವ್ಯಾಸ ತನ್ನ ಕೃತಿಯನ್ನು "ಕೃಷ್ಣ ಚರಿತೆ" ಎಂದು ಹೇಳಿರುವನಾದರೆ ರುದ್ರಭಟ್ಟ ಎಂಬ ಚಂಪೂಕವಿ ತಾನು ಬರೆದಿರುವ ಶ್ರೀಮದ್ಭಾಗವತದ ಕಥೆಗೆ "ಜಗನ್ನಾಥ ವಿಜಯ" ಎಂದು ಹೆಸರಿಟ್ಟು ಕೃಷ್ಣಕಥೆಯನ್ನು ಬರೆದಿರುವನು ಇಲ್ಲಿ ಜಗನ್ನಾಥ ಎಂಬ ಹೆಸರು ಶ್ರೀಕೃಷ್ಣನಿಗೆ ಸಲ್ಲುತ್ತದೆ. ಕಾವ್ಯದ ಮೊದಲ ಪದ್ಯದಲ್ಲಿ " ಕೃಷ್ಣನೆಮಗೀಗಾನಂದ ಸಂದೋಹಮಂ " ಎಂದೇ ಕವಿ ಪ್ರಾರ್ಥಿಸಿರುವನು. ಕವಿ ಲಕ್ಷ್ಮೀಶ ಬರೆದಿರುವ ಜೈಮಿನಿ ಭಾರತದಲ್ಲಿಯೂ "ಪುಣ್ಯಮಿದು ಕೃಷ್ಣಚರಿತಾಮೃತಂ" ಎಂದೇ ಹೇಳಿರುವನು. ಹೀಗೆ ಕೃಷ್ಣಕಥೆ ಭಾರತ ಹಾಗೂ ಭಾಗವತದಲ್ಲಿ ಪ್ರಧಾನವಾಗಿದೆ.

ಭಾರತಖಂಡದಲ್ಲಿರುವ ದೇವಾಲಯಗಳ ಸಮೀಕ್ಷೆಯನ್ನು ನಡೆಸಿದರೆ ಬಹುಶಃ ಕೃಷ್ಣ ದೇವಾಲಯಗಳ ಸಂಖ್ಯೆಯನ್ನು ಇತರ ದೇವಾಲಯಗಳು ಮೀರಲಾರದೆನಿಸುತ್ತದೆ. ಭಾರತದಲ್ಲಿ ಹತ್ತು ಸಹಸ್ರ ಕೃಷ್ಣ ದೇವಾಲಯಗಳಿವೆ ಎಂದು ಕೇಳಿದ್ದೇನೆ! ಕೃಷ್ಣಭಕ್ತರ ಸಂಖ್ಯೆ ಉತ್ತರ ಭಾರತದಲ್ಲಿ ಅದರಲ್ಲೂ ಮಥುರಾನಗರದ ಸುತ್ತಮುತ್ತ ಮಿಗಿಲಾಗಿದೆ. ಉತ್ತರ ಭಾರತದ ಚೈತನ್ಯಮಂದಿರಗಳಲ್ಲಿ ಕೃಷ್ಣಭಜನೆ, ಕೃಷ್ಣಜಪ ಹಾಗೂ ಕೃಷ್ಣದೇವಾಲಯ ಸಂದರ್ಶನ ಪ್ರತಿನಿತ್ಯದ ಒಂದು ಅನನ್ಯ ಕ್ರಿಯೆಯಾಗಿ ಇಂದಿಗೂ ಮುಂದುವರಿಯುತ್ತಿರುವುದು. ಈ ಚೈತನ್ಯ ಪಂಥದ ಪ್ರಭಾವದಿಂದ ಕೃಷ್ಣನನ್ನು ಸಾಕ್ಷಾತ್ಕರಿಸಿಕೊಳ್ಳಲಪೇಕ್ಷಿಸುವವರಿಗೆ ಮಾರ್ಗದರ್ಶನ

ಮಾಡುವ ಅಂತರರಾಷ್ಟ್ರೀಯ ಸಂಸ್ಥೆಯೊಂದು ಪ್ರಪಂಚದಾದ್ಯಂತ ತನ್ನ ಶಾಖೆಗಳನ್ನು ಸ್ಥಾಪಿಸಿರುವುದು ಈ ಕೃಷ್ಣ ಪಂಥೀಯರು ಚೈತನ್ಯ ಪಂಥದವರ ಪ್ರಭಾವಕ್ಕೊಳಗಾದವರು. ಬಂಗಾಲದ ಚೈತನ್ಯಪಂಥವು ಶ್ರೀಮನ್ಮಧ್ವಾಚಾರ್ಯರ ನೇರ ಪ್ರಭಾವದಿಂದ ಆರಂಭಗೊಂಡದ್ದು ಐತಿಹಾಸಿಕ ಸತ್ಯಸಂಗತಿಯಾಗಿದೆ. ಶ್ರೀಮನ್ಮಧ್ವಾಚಾರ್ಯರು ಮೂವತ್ತೇಳು ಗ್ರಂಥಗಳನ್ನು ರಚಿಸುವುದರ ಮೂಲಕ ದ್ವೈತಸಿದ್ಧಾಂತ ಸ್ಥಾಪನೆ ಮಾಡುವುದರೊಂದಿಗೆ ಉಡುಪಿಯಲ್ಲಿ ಶ್ರೀಕೃಷ್ಣ ವಿಗ್ರಹವನ್ನು ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ಪ್ರತಿಷ್ಠಾಪಿಸಿದರು ದೇವಕೀದೇವಿಗಾಗಿ ಶ್ರೀಕೃಷ್ಣನೇ ವಿಶ್ವಕರ್ಮನಿಂದ ಈ ಕೃಷ್ಣ ವಿಗ್ರಹವನ್ನು ಮಾಡಿಸಿದಳೆಂದು ಐತಿಹ್ಯವಿದೆ. ಶ್ರೀಮದಾನಂದತೀರ್ಥ ಕರಾರ್ಚಿತವಾದ ಈ ವಿಗ್ರಹದ ಪೂಜೆ ಇಂದಿಗೂ ಅವರಿಂದಲೇ ಸ್ಥಾಪಿತವಾದ ಅಷ್ಟಮಠಗಳ ಯತಿಶ್ರೇಷ್ಠರಿಂದ ಕ್ರಮವಾಗಿ ಪೂಜಿತವಾಗುತ್ತಿದೆ ಇಂತಹ ಉಡುಪಿಯ ಕೃಷ್ಣನನ್ನು ಕುರಿತು ಕರ್ನಾಟಕದ ಹರಿದಾಸರು ಭಕ್ತಿಯಿಂದ ಹೇಗೆ ಕೀರ್ತಿಸಿದರೆಂದು ಮನಗಾಣುವ ಉದ್ದೇಶದಿಂದ ಈ ಉಡುಪಿ "ಶ್ರೀಕೃಷ್ಣ ಕೃತಿಮಂಜರೀ" ಎಂಬ ಗ್ರಂಥವನ್ನು ಸಂಗ್ರಹಿಸಿ ಸಂಪಾದಿಸಿ, ಪ್ರಕಟಿಸಲಾಗುತ್ತಿದೆ ಈ ಪುಸ್ತಕದಲ್ಲಿ ಉಡುಪಿಯ ಶ್ರೀಕೃಷ್ಣನನ್ನು ಕುರಿತು ರಚಿಸಿರುವ ಹರಿದಾಸರ ಕೀರ್ತನೆ, ಸುಳಾದಿ ಹಾಗೂ ಉಗಾಭೋಗಗಳನ್ನೂ ಮತ್ತು ಸಂಸ್ಕೃತದಲ್ಲಿ ಉಡುಪಿಯ ಶ್ರೀಕೃಷ್ಣನನ್ನು ಕುರಿತು ರಚಿಸಿರುವ ಕೆಲವು ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ ಈ ಕಾರ್ಯವನ್ನು ಸಮಗ್ರವಾಗಿ ಮಾಡುವ ಉದ್ದೇಶವಿದ್ದರೂ, ನಮ್ಮ ಕಣ್ಣಿಗೆ ಬೀಳದಿರುವ ಹಲವು ರಚನೆಗಳು ಕೈಬಿಟ್ಟು ಹೋಗಿರುವ ಸಾಧ್ಯತೆಗಳಿವೆ. ಓದುಗರು ಸಂಗ್ರಹದಲ್ಲಿ ಬಿಟ್ಟುಹೋಗಿರುವ ಕೃತಿಗಳನ್ನು ದಯವಿಟ್ಟು ತಿಳಿಸಿದರೆ, ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ಸೇರಿಸಲು ಸಾಧ್ಯವಾಗುತ್ತದೆ.

### ಕೃತಿಗಳ ಅವಲೋಕನ :

ಈ ಸಂಕಲನದಲ್ಲಿ ವಿವಿಧ ಹರಿದಾಸರು ಉಡುಪಿಯ ಶ್ರೀಕೃಷ್ಣನನ್ನು ಕುರಿತು ರಚಿಸಿರುವ ಒಟ್ಟು 103 ಕೃತಿಗಳಿದ್ದು, ಇದರಲ್ಲಿ 92 ಕೀರ್ತನೆಗಳು, 11 ಸುಳಾದಿಗಳು ಹಾಗೂ ಒಂದು ಉಗಾಭೋಗವೂ ಸೇರಿದೆ, ಈ ಕೀರ್ತನ ಸಾಹಿತ್ಯದಲ್ಲಿ ಉಡುಪಿಯನ್ನು ಕುರಿತು ಪೌರಾಣಿಕ ಹಾಗೂ ಐತಿಹಾಸಿಕ ಕಥೆಗಳು, ಶ್ರೀಮನ್ಮಧ್ವಾಚಾರ್ಯರಿಗೆ ಶ್ರೀಕೃಷ್ಣ ವಿಗ್ರಹ ದೊರಕಿದ ಪ್ರಸಂಗ, ವಿಗ್ರಹದ ಐತಿಹ್ಯ, ಮಧ್ವಸರೋವರದ ಮಹಾತ್ಮ್ಯ, ಕೃಷ್ಣದರ್ಶನ ಹಾಗೂ ಕೃಷ್ಣಪ್ರಸಾದ ಸ್ವೀಕಾರದಿಂದ ದೊರೆಯುವ ಪುಣ್ಯಸ್ವರೂಪ, ಶ್ರೀಕೃಷ್ಣ ಪೂಜಾವೈಖರಿ, ನೈವೇದ್ಯಕ್ರಮ, ವಾರದ ಒಂದೊಂದು ದಿನದಲ್ಲಿ ಶ್ರೀಕೃಷ್ಣನನ್ನು ಅಲಂಕರಿಸುವ ರೀತಿ, ಶ್ರೀಮದ್ಭಾಗವತದ ಹಾಗೂ ಮಹಾಭಾರತದಲ್ಲಿರುವ ಅನೇಕ ಕೃಷ್ಣಕಥಾ ಪ್ರಸಂಗಗಳೇ ಮೊದಲಾದ ವಿಷಯಗಳು ಇಲ್ಲಿನ ಒಟ್ಟು ಕೃತಿಗಳ ವಸ್ತುವಾಗಿದೆ.

ಈ ವಿಷಯಗಳನ್ನು ಕುರಿತು ಹರಿದಾಸರು ನಿವೇದಿಸಿರುವ ಪರಿಯನ್ನು ಉಗಾಭೋಗ. ಸುಳಾದಿಗಳು ಹಾಗೂ ಕೀರ್ತನೆಗಳು ಎಂಬ ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ಪರಿಶೀಲಿಸೋಣ.

**ಉಗಾಭೋಗ :**

ಕೀರ್ತನೆ ಹಾಗೂ ಸುಳಾದಿಗಳೊಡನೆ ಹೋಲಿಸಿದಾಗ ಹರಿದಾಸರು ಕನಿಷ್ಟ ಸಂಖ್ಯೆಯಲ್ಲಿ ಉಗಾಭೋಗಗಳನ್ನು ರಚಿಸಿರುವರೆಂದು ತಿಳಿಯುತ್ತದೆ ಇದುವರೆಗೆ ಹರಿದಾಸರಿಂದ ರಚಿತಗೊಂಡ ಸುಮಾರು 150 ಉಗಾಭೋಗಗಳು ಮಾತ್ರ ದೊರತಿವೆ ಆದರೆ ಕೀರ್ತನೆಗಳ ಸಂಖ್ಯೆ ಸುಮಾರು ಎಂಟು ಸಹಸ್ರವೂ, ಸುಳಾದಿಗಳ ಸಂಖ್ಯೆ ಸುಮಾರು ಒಂದು ಸಹಸ್ರವನ್ನೂ ಮುಟ್ಟುತ್ತದೆ ಅಚ್ಚರಿಯ ಸಂಗತಿ ಎಂದರೆ ಉಡುಪಿಯ ಶ್ರೀಕೃಷ್ಣನನ್ನು ಕುರಿತು ಮುದ್ದುಮೋಹನವಿಠಲದಾಸರಿಂದ ರಚಿತವಾದ ಕೇವಲ ಒಂದೇ ಒಂದು ಉಗಾಭೋಗ ದೊರತಿದೆ ಉಡುಪಿ ಶ್ರೀಕೃಷ್ಣನನ್ನು ಕುರಿತು ಇತರ ಹರಿದಾಸರು ರಚಿಸಿರುವ ಉಗಾಭೋಗ ದೊರಯುಲಿಲ್ಲ

ಮುದ್ದುಮೋಹನ ವಿಠಲದಾಸರ ಈ ಉಗಾಭೋಗದಲ್ಲಿ "ಭವವಡುವಿನೊಳಗ ನೂಕಿ ಮಿಡುಕಿಸಿ ನೋಡುವುದು ತರವೆ' ? ಎಂದು ಕೃಷ್ಣನನ್ನು ದಾಸರು ಪ್ರಶ್ನಿಸುತ್ತಾ "ಭಕ್ತರು ದುಃಖಿಸುತ್ತಿದ್ದಾರೆ, ನೀನು ಮಾತ್ರ ಸಡಗರದಲ್ಲಿ ಪೂಜೆಯಮೇಲೆ ಪೂಜೆ ಒಂದರ ನಂತರ ಮತ್ತೊಂದು ನೈವೇದ್ಯವನ್ನು ಪಡೆಯುತ್ತಾ ನಿರ್ಲಿಪ್ತನಾಗಿರುವೆ" ಎಂದು ಕೆಣಕಿ ಐಹಿಕ ಸುಖಾಪೇಕ್ಷಿಯಾಗಿ ಕೃಷ್ಣನ ದರ್ಶನಕ್ಕೆ ಬಂದವರು ತಾವಲ್ಲ, ದೃಢವಾದ ಜ್ಞಾನ, ಭಕ್ತಿ ವೈರಾಗ್ಯಗಳಿತ್ತು ಶಾಶ್ವತ ಸುಖ ಹಾಗೂ ಆನಂದಾನುಭವಕ್ಕೆ ಕಾರಣವಾಗುವ ಸಾಧನೆಯ ಮಾರ್ಗವನ್ನು ತೋರಿಸು" ಎಂದು ಪ್ರಾರ್ಥಿಸುವರು

**ಸುಳಾದಿಗಳು :**

ಹರಿದಾಸರ ರಚನೆಗಳಲ್ಲಿ ಸಂಖ್ಯೆಯ ದೃಷ್ಟಿಯಿಂದ ಸುಳಾದಿಗಳು ಎರಡನೆಯ ಸ್ಥಾನವನ್ನು ಪಡೆಯುತ್ತದೆ ಎಂಬುದನ್ನು ಮೇಲೆ ತಿಳಿಸಲಾಗಿದೆ ಈ ಮಾತು ಉಡುಪಿಯ ಶ್ರೀಕೃಷ್ಣನನ್ನು ಕುರಿತ ರಚನೆಗಳಿಗೂ ಅನ್ವಯಿಸುತ್ತದೆ ಉಡುಪಿಯ ಶ್ರೀಕೃಷ್ಣನನ್ನು ಕುರಿತು 11 ಸುಳಾದಿಗಳು ದೊರೆತಿದೆ ಇವರಲ್ಲಿ ಇದರಲ್ಲಿ ಸುಳಾದಿದಾಸರು ಎಂದೇ ಖ್ಯಾತರಾಗಿರುವ ವಿಜಯದಾಸರು ರಚಿಸಿರುವ ಆರು ಸುಳಾದಿಗಳು ಸೇರಿವೆ ಈ ಸುಳಾದಿಗಳಲ್ಲಿ ವಿಜಯದಾಸರು ಕೃಷ್ಣನು ಪಾಂಡವರಿಗೆ ಕೃಪೆ ಮಾಡಿದ ಕೆಲವು ಪ್ರಸಂಗಗಳನ್ನೂ, ಉಡುಪಿ ಯಾತ್ರೆಯ ಫಲವನ್ನೂ ಶ್ರೀಕೃಷ್ಣನಿಗೆ ಸಲ್ಲಿಸುವ ಪೂಜಾಪ್ರಕರಣಗಳನ್ನು ತಿಳಿಸಿರುವರು ಶ್ರೀಮದಾನಂದತೀರ್ಥರು ಮುಳುಗುತ್ತಿದ್ದ ಹಡಗನ್ನುರಕ್ಷಿಸಿ ಆಹಡಗಿನಲ್ಲಿದ್ದ ಗೋಪೀಚಂದನದ ಗಡ್ಡೆಯನ್ನುಪಡೆದು ಅದರಲ್ಲಿದ್ದ ಶ್ರೀಕೃಷ್ಣಮೂರ್ತಿಯನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಿದ ಪ್ರಸಂಗವನ್ನು ವಿಜಯ

ದಾಸರು ಹಾಗೂ ವಾದಿರಾಜರು ಅನೇಕ ಕಡೆಗಳಲ್ಲಿ ಉಲ್ಲೇಖಿಸಿರುವ "ಗೋಪೀಚಂದನ ದೊಳಡಗಿ ಅಲ್ಲಿಂದ ಆನಂದಮುನಿಗೊಲಿದು", "ಗೋಪೀಚಂದನದಿಂದ ಬಂದನು" "ದ್ವಾರಾವತಿ ಎತ್ತ'? ಪಡುವಲ ದಿಕ್ಕಿನ ವಾರಿನಿಧಿ ಎತ್ತ? ಗೋಪೀಚಂದನವೆತ್ತ? ಮಾರಾಟದ ಹಡಗು ಹೋಗಿ ಬರುವುದು ಎತ್ತ? ಭಾರತೀಪತಿಯಾದ ಮಧ್ವಮುನಿ ಎತ್ತ"? ಇತ್ಯಾದಿ ವಾಕ್ಯಗಳಲ್ಲಿ ವಿಜಯದಾಸರು ಮಧ್ವಾಚಾರ್ಯರಿಗೆ ಕೃಷ್ಣವಿಗ್ರಹ ಪ್ರಾಪ್ತಿಯಾದ ವಿಷಯವನ್ನು ತಿಳಿಸಿದ್ದಾರೆ. ಹಡಗಿನಿಂದಲಿ ಬಂದು ಕಡಲತಡಿಯಲಿ ನಿಂದು", ಹಡಗಿನಿಂದಲಿ ಬಂದನಂತೆ ಕಡಲತಡಿಯಲಿ ನಿಂತನಂತೆ", "ಸಿಂಧುವಿನ ಮಾರ್ಗದಲಿ ತೌಳವಜನರ ದೇಶಕ್ಕೆ ಬಂದು ಮಧ್ವಾಚಾರ್ಯರಾ ಕೈಯಿಂದ ಪೂಜೆಯು ಗೊಂಡ ಕೃಷ್ಣನೆ", ಇತ್ಯಾದಿ ವಾಕ್ಯಗಳಲ್ಲಿ ವಾದಿರಾಜರು ಈ ಪ್ರಸಂಗವನ್ನು ಉಲ್ಲೇಖಿ ಸಿರುವರು. ಹಡಗಿನಿಂದಲಿ ಬಂದು ಉಡುಪಿಲಿ ನೆಲೆಸಿರುವ" ಎಂದು ವ್ಯಾಸರಾಯರು ಒಂದೆಡೆಯಲ್ಲಿ ತಿಳಿಸಿದ್ದಾರೆ.

"ಮಧ್ವಸರೋವರಸ್ನಾನ ಮುದ್ದುಕೃಷ್ಣನ ಧ್ಯಾನ ಶುದ್ಧನಾಗಿ ಮಾಡೆ ವಿಜಯ ವಿಠ್ಠಲ ಕಾವ" ಎಂಬ ಫಲಸ್ತುತಿಯುಳ್ಳ 'ಅಣುಮೂರುತಿ ಪರಮಾಣು ಮೂರುತಿ" ಎಂದು ಆರಂಭಗೊಳ್ಳುವ ಸುಳಾದಿಯಲ್ಲಿ ಕೃಷ್ಣವಿಗ್ರಹದ ಪೌರಾಣಿಕ ಹಾಗೂ ಐತಿಹಾ ಸಿಕ ಕಥೆಯ ಪ್ರಸ್ತಾವನೆ ಇದೆ. ಉಡುಪಿಯಲ್ಲಿ ಶ್ರೀಕೃಷ್ಣನ ಸಂದರ್ಶನ ಮಾಡಿ "ಒಡಲತುಂಬ ಮೆದ್ದವಗೆ ವರಗಳ ಹರಿ ಏನು ಕೊಡಲಿ" ಎಂದು ತನ್ನ ಸತಿಯ ಕೂಡಾ ಡುವ" ಎಂದು ವಿಜಯದಾಸರು 'ಅನ್ನಬ್ರಹ್ಮನ' ಕಾರುಣ್ಯವನ್ನು ವರ್ಣಿಸಿರುವರು. "ಎಲ್ಲೆ ವೈಭೋಗವಿದು" ಎಂಬ ಸುಳಾದಿಯು ಒಂದು ನಿಂದಾಸ್ತುತಿ. ಕೃಷ್ಣನಾಗಿ ಅವತರಿಸಿದಾಗ ನಂದಗೋಪ, ಯಶೋದೆ, ಗೋಪಿಕಾಸ್ತ್ರೀಯರು ಹಾಗೂ ಯಾದ ವರೇ ಮೊದಲಾದವರು ಬಾಂಧವ್ಯ, ಪರಿಚಯ ಹಾಗೂ ಸಲಿಗೆಯ ಕಾರಣದಿಂದ ಕೃಷ್ಣ ನನ್ನು ಭಜಿಸಲಿಲ್ಲವೆಂದು ವಿಜಯದಾಸರು ವಿವರಿಸಿ, "ಹಿಂದಲ್ಲೂ ಇಲ್ಲದ ವೈಭವ ಉಡುಪಿಯಲ್ಲಿ ಶ್ರೀಕೃಷ್ಣನಿಗೇಕೆ ಉಂಟಾಗಿದೆ" ಎಂದು ಪ್ರಶ್ನಿಸಿ ಕದ್ದು ತಿಂಬವಗೆ ಬಹು ಉಪಚಾರ" ಉಡುಪಿಯಲ್ಲಿ ನಡೆಯುತ್ತದೆ ಎಂದು ವಿಸ್ಮಯಪಟ್ಟು ಭಗವಂತನಿಗೆ ವಂದಿಸಿರುವರು

ರಾಮಚಂದ್ರ ವಿಠಲರು ಸುಳಾದಿಯೊಂದರಲ್ಲಿ ಎಲ್ಲ ಬಗೆಯ ಭಕ್ತರೂ ಬಗವಂತ ನನ್ನು ಪೂಜಿಸಿ ನಾನಾ ವಿಧವಾದ ಬೇಡಿಕೆಗಳನ್ನು ಮಂಡಿಸುವುದರಿಂದ ಉಡುಪಿಯಲ್ಲಿ ಶ್ರೀಕೃಷ್ಣ "ಬೇಡುವ ಪೂಜಾರಿ"ಗಳನ್ನು ದೂರವಿಡುವ ಉದ್ದೇಶದಿಂದ ವೈರಾಗ್ಯನಿಧಿ ಗಳಾದ ಯತಿವರೇಣ್ಯರು ಮಾತ್ರ ಪೂಜಿಸುವಂತಹ ಪದ್ಧತಿಯುಂಟು ಮಾಡಿರಬೇ ಕೆಂದು ತರ್ಕಿಸಿರುವ ಪರಿ ನೂತನವಾಗಿದೆ.

ವರದಕೇಶವಾಂಕಿತದಾಸರು ಉಡುಪಿಯ ಕೃಷ್ಣನನ್ನು ಬಡವರ ಭಾಗ್ಯನಿಧಿ, ಭಾಗವತರ ಭಾಗ್ಯ, ಆನಂದದ ಮಡು" ಎಂದು ವರ್ಣಿಸಿ ಗೋಪಾಲಕರನ್ನೂ, ಗೋ ಪಿಯರನ್ನೂ ವಂಚಿಸಿ ಗೋವುಗಳಿಂದ ದೂರವಾಗಲು ಉಡುಪಿಗೆ ಕೃಷ್ಣ ದಯಮಾಡಿಸಿ

ದನೆಂದು ಹೇಳಿ, "ಬಿಡೆ ನಿನ್ನ ದಾಸ್ಯದ ವರವುಪದವಿಯನು" ಎಂದು ಪ್ರತಿಜ್ಞೆ ಮಾಡಿರುವರು. ಈ ಸುಳಾದಿಯ ಕೊನೆಯ ಭಾಗದ "ಜತೆ"ಯಲ್ಲಿ ಮೂರು ಸಾಲು ಸಾಲುಗಳಿವೆ. "ಜತೆ"ಯಲ್ಲಿ ಎರಡೇ ಸಾಲುಗಳಿರಬೇಕು. "ಜತೆ" ಎಂದರೆ ಜೋಡಿ-ಎರಡು ಎಂದರ್ಥ. ಈ ಸುಳಾದಿಯ ಜತೆಯಲ್ಲಿಯೂ ಮೂರನೆಯ ಸಾಲಿನಲ್ಲಿ ಮೊದಲ ಸಾಲಿನ ಶಬ್ದಗಳೇ ಪುನರಾವೃತ್ತಿ ಗೊಂಡಿರುವುದರಿಂದ ಕೊನೆಯ ಸಾಲನ್ನು ಕೈಬಿಡುವುದೇ ಲೇಸೆನಿಸುತ್ತದೆ.

ಗೋಪಾಲದಾಸರಿಂದ ರಚಿತವಾಗಿ ದೊರೆತಿರುವ ಏಕೈಕ ಸುಳಾದಿಯಲ್ಲಿ ಶ್ರೀ ಕೃಷ್ಣನಾಗಿ ಅವತರಿಸಿದಾಗ ತೋರಿದ ನಾನಾ ಲೀಲಾವಿನೋದಗಳ ವರ್ಣನೆಯೊಡನೆ ಭಗವಂತನ ಸ್ತೋತ್ರವನ್ನು ಬಹು ಭಕ್ತಿಯಿಂದ ಹೀಗೆ ಮಾಡಿರುವರು.

"ನಮೋ ನಮೋ ಪಾಂಡವಪಕ್ಷಪಾತಿಯೆ
ನಮೋ ನಮೋ ಅಗಣಿತ ಗುಣಗಣಾಂಬುಧೆ
ನಮೋ ನಮೋ ನಿರ್ದೋಷಿ ನಿಜ ಆನಂದ
ನಮೋ ನಮೋ ಪ್ರಾಕೃತಗಂಧವಿದೂರನೆ
ನಮೋ ನಮೋ ನಿತ್ಯರಂಜನ ಪೂರ್ಣ
ನಮೋ ನಮೋ ಸ್ವಗತಭೇದವಿವರ್ಜಿತ
. . . . . . . . . . . . . . . . . .
ನಮೋ ನಮೋ ಕಾರುಣ್ಯ ಕಾಪಟ್ಯರಹಿತ
ನಮೋ ನಮೋ ವಿಷ್ಣು ಸಾಕಾರ ಜಲದ
. . . . . . . . . . . . . . . . . . . . . . . .
. . . . . . . . . . . . . . . . . . . .
ನಮೋ ನಮೋ ಗೋಪಾಲವಿಠಲ ಮೂರುತಿ
ನಮೋ ನಮೋ ಜಯ ಉಡುಪಿನ ಸಿರಿಕೃಷ್ಣ

ಕೀರ್ತನೆಗಳು :

ಇವರು ರಚಿಸಿರುವ 92 ಕೀರ್ತನೆಗಳು ಉಡುಪಿಯ ಶ್ರೀಕೃಷ್ಣನ ಪರವಾಗಿವೆ. ಇವುಗಳಲ್ಲಿ ಹಲವು ಕೃತಿಗಳು ಕೃಷ್ಣನ ಬಾಲ್ಯಲೀಲೆಯನ್ನು ವರ್ಣಿಸುವ ಭಾಗವತದ ಕಥಾನುಪ್ರಾಣಿತವಾಗಿವೆ. ಉಡುಪಿಯಾತ್ರೆಯನ್ನು ಕೈಗೊಳ್ಳುವುದರಿಂದುಂಟಾಗುವ ಪುಣ್ಯಲಾಭ ಮಧ್ವಸರೋವರದ ಮಹಾತ್ಮ್ಯೆಯನ್ನೊಳಗೊಂಡಿರುವ ಈ ಕೀರ್ತನ ಸಮುದಾಯದಲ್ಲಿ ಉಡುಪಿಯನ್ನು ಕುರಿತು ಅನೇಕ ವಿವರಗಳಿವೆ.

ಉಡುಪಿಯ ಶ್ರೀಕೃಷ್ಣನನ್ನು ಎರಡು ವರ್ಷಗಳವರೆಗೆ ಸತತವಾಗಿ ಪೂಜಿಸುವ ಸುಯೋಗವನ್ನು ಹಲವು ಬಾರಿ ಪಡೆದ ಭಾವೀ ಸಮೀರರೆಂದು ಪ್ರಖ್ಯಾತವಾಗಿರುವ ಋಜುಗಣಸ್ಥರೆನಿಸಿರುವ ಶ್ರೀ ವಾದಿರಾಜ ಗುರುಸಾರ್ವಭೌಮರು ರಚಿಸಿರುವ ಮೂವತ್ತೆರಡು ಕೀರ್ತನೆಗಳು ಉಡುಪಿ ಶ್ರೀಕೃಷ್ಣನ ಪರವಾಗಿರುವುದು. ಇಷ್ಟು ಭಾರೀಮೊತ್ತದಲ್ಲಿ ಇತರ ಹರಿದಾಸರಾರೂ ಕೀರ್ತನೆಗಳನ್ನು ರಚಿಸಿರುವುದಿಲ್ಲ. ಇದು ಉಡುಪಿಯ ಶ್ರೀಕೃಷ್ಣನಲ್ಲಿ ವಾದಿರಾಜರಿಗಿದ್ದ ಅತಿಶಯ ಭಕ್ತಿದ್ಯೋತಕವಾಗಿದೆ ಈ ಕೃತಿ ಸಮುದಾಯದಲ್ಲಿ ಭಕ್ತಿಭಾವ ವೈವಿಧ್ಯವಿದ

ಕೋಗಿಲೆಯೊಂದನ್ನು ಸಂಬೋಧಿಸಿ ' ಶ್ರೀಪತಿಯು ಕಂಡರೆ ಬರಹೇಳು" ಎಂದು ಹೇಳುವುದರ ಮೂಲಕ ಕೃಷ್ಣಸಾಕ್ಷಾತ್ಕಾರದ ಪ್ರಯತ್ನವನ್ನು ಮಾಡಿರುವ ವಾದಿರಾಜರು "ನೀರೆ ತೋರಲೆ ನೀಲವರ್ಣದ ದೇವನ' ಎಂದು ಮಧುರ ಭಕ್ತಿ ಭಾವವನ್ನು ಪ್ರಕಟಿಸಿರುವರು ಶ್ರೀಕೃಷ್ಣನನ್ನು ಪೂಜಿಸುವಾಗ ಅಥವಾ ಪೂಜಿಸುವುದನ್ನು ನನೆಸಿದಾಗ ವಾದಿರಾಜರ ಮನಸ್ಸಿನಲ್ಲಿ ಭಾಗವತದ ಕಥೆಗಳು ಹೇಗೆ ನೆನಪಿಗೆ ಬರುತ್ತಿತ್ತೆಂಬುವನ್ನು ಹಲವು ಕೃತಿಗಳಲ್ಲಿ ಗುರುತಿಸಬಹುದು. ಇದರಲ್ಲಿ ದಶಾವತಾರದ ಕಥೆಗಳೂ ಸೇರಿವೆ "ಏನು ಸುಕೃತ ಮಾಡಿದಳೋ ಯಶೋದೆ" ಎಂಬ ಕೃತಿಯಲ್ಲಿ ವಾದಿರಾಜರು ಯಶೋದೆಯ ಪುಣ್ಯವನ್ನು ಕೊಂಡಾಡಿರುವರು

"ನೆನೆಮನವನುದಿನ ನೀಲವರ್ಣದ ಪದವ" ಎಂದು ಆರಂಭಗೊಳ್ಳುವ ಒಂಭತ್ತು ನುಡಿಗಳ ಕೀರ್ತನೆಯಲ್ಲಿ ಕೃಷ್ಣನ ಬಾಲ್ಯಲೀಲೆಗಳನ್ನು ನ" ಕಾರದ ಪ್ರಾಸಾನುಪ್ರಾಸದಲ್ಲಿ ಪೋಣಿಸಿರುವುದು ಕರ್ಣಾನಂದಕರವಾಗಿದೆ ಜಾನಪದ ಧಾಟಿಯಲ್ಲಿ ವಾದಿರಾಜರು ರಚಿಸಿರುವ ಸಂಕ್ಷಿಪ್ತವಾಗಿರುವ "ಜಯ ಮಧ್ವವಲ್ಲಭ ಜಯ ಶುದ್ಧ ಸುಲಭ' ಎಂದು ಆರಂಭಗೊಳ್ಳುವ ಕೀರ್ತನೆಯನ್ನು ಒಮ್ಮೆ ಓದಿದರೆ ಸಾಕು ಅದರ ಶಬ್ದಲಾಲಿತ್ಯದ ಕಾರಣದಿಂದ ಬಹುಬೇಗ ನಾಲಿಗೆಯಲ್ಲಿ ಭದ್ರವಾಗಿ ಉಳಿಯುತ್ತದೆ ಈ ಕೀರ್ತನೆಯಲ್ಲಿ ಉಡುಪಿಯ ಅಷ್ಟಮಠಗಳ ಮೂಲಪುರುಷರಾದ ಶ್ರೀ ನರಸಿಂಹತೀರ್ಥ, ಶ್ರೀ ಹೃಷೀಕೇಶತೀರ್ಥ, ಶ್ರೀ ಜನಾರ್ದನತೀರ್ಥ, ಶ್ರೀ ಉಪೇಂದ್ರತೀರ್ಥ, ಶ್ರೀ ವಾಮನತೀರ್ಥ, ಶ್ರೀ ವಿಷ್ಣುತೀರ್ಥ, ಶ್ರೀ ರಾಮತೀರ್ಥ, ಶ್ರೀ ಅಧೋಕ್ಷಜತೀರ್ಥರನ್ನೂ ಮತ್ತು ಶ್ರೀ ಪದ್ಮನಾಭತೀರ್ಥ ಹಾಗೂ ಹನುಮ-ಭೀಮ ಮಧ್ವಾವತಾರ ಮಾಡಿದ ವಾಯುದೇವರನ್ನೂ ವಂದಿಸಿರುವರು. ಬಣ್ಣಿಸಲಳವೆ ನಾನು" ಎಂಬ ಕೀರ್ತನೆಯಲ್ಲಿ ವಾದಿರಾಜರು ವಾರದ ಏಳು ದಿನಗಳಲ್ಲಿ ಶ್ರೀಕೃಷ್ಣನನ್ನು ಅಲಂಕರಿಸುವ ಪರಿಯನ್ನು ವಿವರಿಸಿದ್ದಾರೆ. ಉಡುಪಿಯ ಶ್ರೀಕೃಷ್ಣನಿಗೆ ಭಾನುವಾರ ಸೂರ್ಯಾಲಂಕಾರ, ಸೋಮವಾರ ಗೋಪಾಲಂಕಾರ, ಮಂಗಳವಾರ ಕಿರಾತಾಲಂಕಾರ, ಬುಧ ಮತ್ತು ಗುರುವಾರಗಳೆರಡು ವಿಪ್ರಾಲಂಕಾರ ಶುಕ್ರವಾರ ಮೋಹಿನಿ ಅಲಂಕಾರ ಹಾಗೂ ಶನಿವಾರ ವೆಂಕಟರಮಣಾಲಂಕಾರವನ್ನು ಹಾಕುವ ಪದ್ಧತಿ ಇದೆ ಇಂದ್ರಲೋಕವ ಪೋಲ್ವ ದ್ವಾರಕಿಯಿಂದ ನಮ್ಮನ್ನು ಸಲಹಲೋಸುಗ' ಎಂಬ ಒಂಭತ್ತು ಪದ್ಯಗಳುಳ್ಳ ಸ್ತೋತ್ರ ಭಾಮಿನಿ ಷಟ್ಪದಿಯಲ್ಲಿದ್ದು ಉಡುಪಿಯ ಶ್ರೀಕೃಷ್ಣನನ್ನು ಪೂಜಿಸುವ ವೈಖರಿಯ ಒಂದು ಸ್ವರೂಪವನ್ನು ಪರಿಚಯ ಮಾಡಿಕೊಟ್ಟಿದಾರೆ.

"ಉತ್ಸವದಲಾಹ್ನಿಕವ ಕಡುಜನರು ಕೇಳಿರಯ್ಯ" ಎಂಬ ಕೀರ್ತನೆಯಲ್ಲಿ ಉಡುಪಿಯ ಕೃಷ್ಣನಿಗೆ ಬೆಳಗಿನ ಝಾವದಿಂದ ರಾತ್ರಿಯವರೆಗೆ ನಡೆಸುವ ಪೂಜಾವೈಖರಿಯನ್ನು ವಿವರಿಸಿದ್ದಾರೆ. ಉಡುಪಿಗೆ ಹೋಗಿ ಒಂದು ದಿನದ ಎಲ್ಲಾ ಪೂಜೆಗಳನ್ನು ನೋಡಿ ಬಂದವರು ಈ ಕೀರ್ತನೆಯನ್ನು ಓದುತ್ತಿರುವಾಗ ಉಡುಪಿಯ ಶ್ರೀಕೃಷ್ಣನ ಮುಂದೆ ತಾವು ಇರುವಂತೆ ಭಾಸವಾಗುತ್ತದೆ. ಮಧ್ವಸರೋವರದಿಂದ ಶೋಧಿಸಿದ ತಿಳಿನೀರನ್ನು ಚಿನ್ನದ ಕಲಶದಲ್ಲಿ ತರುವಾಗ ಮಾಡುವ ಘಂಟನಾದದ ವಿವರಣೆಯನ್ನ ಮರೆಯದೆ ವಾದಿರಾಜರು ಇಲ್ಲಿ ಉಲ್ಲೇಖಿಸಿರುವರು. ಹದಿನಾಲ್ಕು ನುಡಿಗಳ ಈ ಕೀರ್ತನೆಯನ್ನೋದಿದವರಿಗೆ "ಆದಿವ್ಯಾದಿಗಳಟ್ಟಿ ಬಹುಭಾಗ್ಯ ಕೊಡುವ" ಎಂದು ಫಲಸ್ತುತಿಯನ್ನು ಹೇಳಿರುವರು.

ಉಡುಪಿಯಲ್ಲಿ ಶ್ರೀಕೃಷ್ಣನ ದರ್ಶನವನ್ನು ಚಿಕ್ಕಚಿಕ್ಕ 9 ಕಿಂಡಿಗಳ ಮೂಲಕ ಮಾತ್ರ ಮಾಡಬೇಕಾಗಿದೆ. ಎಲ್ಲಾ ದೇವಾಲಯಗಳಿರುವಂತೆ ಶ್ರೀಕೃಷ್ಣ ವಿಗ್ರಹಾಭಿಮುಖವಾಗಿ ಬಾಗಿಲು ಇರುವುದಿಲ್ಲ. ಯತಿಗಳು ಮಾತ್ರ ಪೂಜಿಸುವ ಪದ್ಧತಿ ಮೊದಲಿನಿಂದ ಇರುವುದರಿಂದ ಮಡಿಯನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ಈ ರೀತಿ ದೇವಾಲಯವನ್ನು ನಿರ್ಮಿಸಿರಬೇಕೆನಿಸುತ್ತದೆ. ದೇವಾಲಯದ ಪೂಜಾದ್ವಾರವನ್ನು ಪ್ರವೇಶಿಸಿ ಕ್ರಮಿಸಿದ ತರುವಾಯ ಬಲಭಾಗಕ್ಕೆ ಮಧ್ವಸರೋವರವಿದ್ದು ಎಡಭಾಗದ ಬಾಗಿಲನ್ನು ಪ್ರವೇಶಿಸಿ ಅರ್ಧ ಪ್ರದಕ್ಷಿಣೆ ಮಾಡಿದ ತರುವಾಯ ಶ್ರೀಕೃಷ್ಣನನ್ನು 9 ಕಿಂಡಿಗಳ ಮೂಲಕ ದರ್ಶಿಸಬಹುದು ಈ ಪದ್ಧತಿಯು ವಾದಿರಾಜರ ಕಾಲದಲ್ಲಿದ್ದಿತೆಂದು "ನೋಡಿದೆ ಶ್ರೀಕೃಷ್ಣನ ನೋಡಿದೆ–ನೋಡಿದೆ ಒಂಭತ್ತುಗೂಡಿನ ಕಿಟಕಿಯೊಳ್ಕೂಡಿದ ಮಂದಿಯೊಳ್ಗಾಡಿಕಾರನನಿಂದು" ಎಂಬ ಅವರ ಕೃತಿಯ ಆಧಾರದಿಂದ ತಿಳಿಯುತ್ತದೆ.

ಉಡುಪಿಯ ಶ್ರೀಕೃಷ್ಣನನ್ನು ಕುರಿತು ವಿಜಯದಾಸರು ರಚಿಸಿರುವ ಹದಿನೆಂಟು ಕೀರ್ತನೆಗಳು ದೊರೆತಿವೆ. ಇವುಗಳಲ್ಲಿ "ನೋಡಿದೇ ಉಡುಪಿನ ವಾಸನ ನೋಡಿದೆ" ಎಂದು ಆರಂಭವಾಗುವ ಕೀರ್ತನೆಯು ಮೂವತ್ತೊಂದು ನುಡಿಗಳುಳ್ಳ ದೀರ್ಘ ರಚನೆಯಾಗಿದೆ ಇದರಲ್ಲಿ ಉಡುಪಿಯ ಪೌರಾಣಿಕ ಕಥೆ ಮತ್ತು ಶ್ರೀಕೃಷ್ಣನ ಮಹಾತ್ಮ್ಯೆಯನ್ನು ವಿವರಿಸಿ ಮಕರ ಸಂಕ್ರಾಂತಿ ಹಬ್ಬದ ಅಂಗವಾಗಿ ನಡೆಸುವ ವಿಶೇಷ ಜೋರ್ಣೋತ್ಸವಪೂಜಾವಿವರಣೆ ಇದರಲ್ಲಿ ಕೊಟ್ಟಿರುವರು "ಆವಜನುಮದ ಪುಣ್ಯಫಲಿಸಿತೆನಗೆ ಈ ಉಡುಪಿ ಕೃಷ್ಣನ ಪ್ರಸಾದ ಭುಂಜಿಸಿದೆ' ಎಂಬ ಪದದಲ್ಲಿ ಉಡುಪಿಯಲ್ಲಿ ಕೃಷ್ಣನಿಗೆ ನಿವೇದಿತವಾದ ಒಂದೊಂದು ಪದಾರ್ಥವನ್ನೂ ಸ್ವೀಕರಿಸುವುದರಿಂದ ದೊರೆಯುವ ಪುಣ್ಯಸ್ವರೂಪವನ್ನು ವಿವರಿಸಿರುವರು. ಶ್ರೀಕೃಷ್ಣನಿಗೆ ತೊಡಿಸುವ ಸ್ತ್ರೀರೂಪದ ಅಲಂಕಾರ ವರ್ಣನೆಯನ್ನು ನೋಡಿದ್ಯಾ ರಂಗನ ನೋಡಿದ್ಯಾ" ಎಂಬ ಕೃತಿಯಲ್ಲಿ ಕಾಣಬಹುದು. ಸಂಪತ್ತು ನಿನಗಿಂದು ಪೊಸತಾಯಿತೆ" ಎಂಬ ಕೀರ್ತನೆಯಲ್ಲಿ ಕೃಷ್ಣನು ಗೋಪಾಲಕರೊಡನೆ ಆಡಿ ಬೆಳೆದು, ಉಂಡ ದಿನಗಳ ವೈಶಿಷ್ಟ್ಯವನ್ನು

ಉಡುಪಿಯಲ್ಲಿ ಬೆಳಗಿನಿಂದ ರಾತ್ರಿಯವರೆಗೆ ಶ್ರೀಕೃಷ್ಣನಿಗೆ ನಡೆಸುವ ಪೂಜೆ, ನೈವೇದ್ಯಗಳೊಡನೆ ಹೋಲಿಸಿ "ವಿರಕ್ತಿ"ಯನ್ನು ದಯಪಾಲಿಸಬೇಕೆಂದು ವಿಜಯದಾಸರು ಪ್ರಾರ್ಥಿಸಿದರು "ರಜತ ಪೀಠದ ಯಾತ್ರೆ ರಜೋತಮಗುಣವುಳ್ಳ" ಜೀವರು ಕೈಗೊಂಡರೆ ಐಹಿಕ ಫಲಗಳು ದೊರೆಯುವುದಾಗಿಯೂ, ಮುಕ್ತಿಯೋಗ್ಯರು, ಉಡುಪಿ ಯಾತ್ರೆ ಮಾಡಿದರೆ ಜ್ಞಾನ, ಭಕ್ತಿ ವೈರಾಗ್ಯವಧಿಕವಾಗುವುದೆಂದು ದಾಸರು ತಿಳಿಸಿರುವರು. "ಕೃಷ್ಣರಾಯನ ದರುಶನಕೆ ಮನಮಾಡಿದ ಶಿಷ್ಟಾಚಾರಣೆ ಲಿಂಗಕಾಯ ಬಂಗಾ" ಎಂಬ ವಿಜಯದಾಸರ ವಾಕ್ಯ ಉಡುಪಿಯ ಮಹಾತ್ಮ್ಯೆಯನ್ನು ಸ್ಪಷ್ಟಪಡಿಸುತ್ತದೆ.

"ಮಧ್ವಸರೋವರದಿ ಮೀಯದ ಜನುಮವೇನು ? ಮುದ್ದುಕೃಷ್ಣನ್ನ ನೋಡದ ಅಕ್ಷಿಯೇನು ? ' ಎಂದು ಗಂಡುನುಡಿಯಿಂದ ಪ್ರಶ್ನಿಸಿರುವ ಪ್ರಸನ್ನ ವೆಂಕಟದಾಸರು ಕಡಲಶಯನನೊಳು ದೃಢಭಕ್ತಿ ಇರದೆ' ಯಾವುದೇ ರೀತಿಯ ದೇಹದಂಡನೆಯಿಂದ ಫಲದೊರೆಯದೆಂದು ಹೇಳಿ 'ಎಂದು ಕಾಂಬನೊ ಎನ್ನ ಸಲಹುವ ತಂದೆ ಉಡುಪಿಯ ಜಾಣನ' ಎಂದು ಪರಿತಪಿಸಿರುವರು.

ಶ್ರೀ ವ್ಯಾಸರಾಜರು ರಚಿಸಿರುವ ಏಳು ಕೃತಿಗಳು ಉಡುಪಿಯ ಶ್ರೀಕೃಷ್ಣನ ಪರವಾಗಿದ್ದು ಇವುಗಳಲ್ಲಿ ಐದು ಕೀರ್ತನೆಗಳು ಶ್ರೀಕೃಷ್ಣನ ಬಾಲ್ಯ ಲೀಲೆಗೆ ಸಂಬಂಧಿಸಿದ ಭಾಗವತದ ಕಥೆಯ ಸಂಗ್ರಹವೆನ್ನಬಹುದು ಎರಡು ಕೀರ್ತನೆಗಳಲ್ಲಿ ಭಕ್ತಿಯಿಂದ ಕೃಷ್ಣನನ್ನು ಸ್ತೋತ್ರ ಮಾಡಿರುವರು "ರಂಗ ಬಂದ ಬೃಂದಾವನದಿ ನಿಂದ" "ಕಡೆಗೋಲು ತಾರೆನ್ನ ಚಿನ್ನವೇ", "ಬಾರೋ ಬೇಗ ನೀರಜಾಕ್ಷ' ಎಂಬ ಕೀರ್ತನೆಗಳಲ್ಲಿ ವ್ಯಾಸರಾಜರು ಸಲಿಗೆಯಿಂದ ಶ್ರೀಕೃಷ್ಣನನ್ನು ಮಾತನಾಡಿಸಿರುವ ಪರಿಯನ್ನು ಗುರುತಿಸಿದಾಗ ಅಚ್ಚರಿ-ಆನಂದವುಂಟಾಗುತ್ತದೆ. ಶ್ರೀ ವ್ಯಾಸರಾಜರು ಉಡುಪಿಯೊಡನೆ ಇಟ್ಟುಕೊಂಡಿದ್ದ ನಿಕಟಸಂಪರ್ಕದ ಸ್ವರೂಪವನ್ನು ಈ ಕೃತಿಗಳ ಅವಲೋಕನದಿಂದ ತಿಳಿಯಬಹುದು.

ಶ್ರೀ ವ್ಯಾಸರಾಜರು ಹಾಗೂ ಶ್ರೀ ವಾದಿರಾಜರೊಡನೆ ನಿಕಟಸಂಪರ್ಕವನ್ನು ಹೊಂದಿದ್ದ ಕನಕದಾಸರು ಕೇವಲ ಒಂದು ಕೀರ್ತನೆಯನ್ನು ಉಡುಪಿಯ ಕೃಷ್ಣನನ್ನು ಕುರಿತು ರಚಿಸಿರುವ ಸಂಗತಿ ಅಚ್ಚರಿಯುಂಟುಮಾಡುತ್ತದೆ. ಕನಕದಾಸರ ಭಕ್ತಿಗೊಲಿದು ಶ್ರೀಕೃಷ್ಣನ ವಿಗ್ರಹವೇ ಹಿಂದು ಮುಂದಾಯಿತೆಂಬ ಪ್ರಚಲಿತ ಪವಾಡಪೂರ್ಣ ಕಥೆ ಉಡುಪಿಯೊಡನೆ ಕನಕದಾಸರ ಸಂಬಂಧ ನಿಕಟವಾಗಿದ್ದಿತೆಂದು ತಿಳಿಸುವುದಾದರೂ ಈ ಕಥೆಯನ್ನು ಹರಿದಾಸರು ಉಲ್ಲೇಖಿಸಿರುವುದಿಲ್ಲ. "ಪೂರ್ವಜನ್ಮದಿ ನಾ ಮಾಡಿದ ಕರ್ಮದಿಂ ಉರ್ವಿಯೊಳು ಜನಿಸಿದೆನೋ ಕೃಷ್ಣ" ಎಂಬ ಕೀರ್ತನೆಯಲ್ಲಿ ಕನಕದಾಸರು "ಜೀವನದಲ್ಲಿ ನಾನಾ ರೀತಿಯ ಕಷ್ಟಕಾರ್ಪಣ್ಯಗಳಿಂದ ಬಳಲುತ್ತಿರುವುದಾಗಿ ಹೇಳಿ ತಮ್ಮ ಕಷ್ಟಗಳನ್ನು ಪರಿಹರಿಸಬೇಕೆಂದು ಪ್ರಾರ್ಥಿಸಿರುವರು.

“ದಾಸರೆಂದರೆ ಪುರಂದರದಾಸರು” ಎಂದು ಪ್ರಖ್ಯಾತರಾಗಿರುವ ಪುರಂದರರು ರಚಿಸಿರುವ ಹತ್ತು ಕೀರ್ತನೆಗಳು ಉಡುಪಿಯ ಕೃಷ್ಣನ ಪರವಾಗಿದೆ. “ಕಂಡೆ ನಾ ಉಡುಪಿಯ ಕೃಷ್ಣರಾಯನ” ಎಂಬ ಕೀರ್ತನೆಯಲ್ಲಿ ಉಡುಪಿಯಲ್ಲಿನ ವಿವಿಧ ದೇವಾಲಯಗಳನ್ನು ದರ್ಶಿಸಬೇಕಾದ ಕ್ರಮವನ್ನು ತಿಳಿಸಿದ್ದಾರೆ ಪುರಂದರದಾಸರು ಉಳಿದ ಆರು ಕೀರ್ತನೆಗಳಲ್ಲಿ ಕೃಷ್ಣನ ವಿಗ್ರಹದ ವರ್ಣನೆ, ಕಾಳಿಂಗಮರ್ದನದ ವರ್ಣನೆ ಮತ್ತು ಶ್ರೀಕೃಷ್ಣಾವತಾರದಲ್ಲಿನ ಕೆಲವು ಕಥೆಗಳನ್ನು ಸಂಗ್ರಹಿಸಿದ್ದಾರ “ಏನ ಬರೆದೆಯೋ ಬ್ರಹ್ಮ ನೀನೆಷ್ಟು ನಿರ್ದಯನೋ” ಎಂಬ ಕೀರ್ತನೆಯಲ್ಲಿ ಸಾಂಸಾರಿಕಾ ಜೀವನದ ದುಃಖಸ್ವರೂಪವನ್ನು ವಿವರಿಸಿ ದುಃಖನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ.

ಆಧುನಿಕ ಯುಗದ ಹರಿದಾಸರಾದ ಶ್ರೀ ಗುರುಗೋವಿಂದವಿಠಲದಾಸರು “ಕ್ಷೇತ್ರವೆಂದರೆ ಉಡುಪಿಕ್ಷೇತ್ರ” ಎಂದು ಬಣ್ಣಿಸಿ “ಕಾಸುವೀಸಕೆ ವರದನಲ್ಲವೊ ಭಕುತಿ ಪಾಶಗಳಿಗೇ ಒಲಿವಶ್ರೀಕೃಷ್ಣ” ಎಂದು ಮಧ್ವಸಿದ್ಧಾಂತವನ್ನು ಪ್ರತಿಪಾದಿಸಿ “ಭಗವಂತನು ಕಾಂಚನಪ್ರಿಯನಲ್ಲ, ಭಕ್ತಿಪ್ರಿಯ” ಎಂಬುದನ್ನು ಮನದಟ್ಟುಮಾಡಲು ಪ್ರಯತ್ನಿಸಿದ್ದಾರೆ.

ಉಡುಪಿಯ ಕೃಷ್ಣನನ್ನು ಕುರಿತು ಶ್ರೀವಾದರಾಜರು, ಜಗನ್ನಾಥದಾಸರು, ಗುರುಜಗನ್ನಾಥದಾಸರು, ಹರಪನಹಳ್ಳಿಭೀಮವ್ವ, ತುಫಾಕಿ ವೆಂಕಟರಮಣಾಚಾರ್ಯರು ರಚಿಸಿರುವ ಒಂದೆರೆಡು ಕೃತಿಗಳು ದೊರೆತಿದ್ದು ಇಲ್ಲಿ ಸಂಗ್ರಹಿಸಲಾಗಿದೆ.

ಶ್ರೀ ವಿಶ್ವೇಂದ್ರತೀರ್ಥಸ್ವಾಮಿಗಳು “ರಾಜೇಶ ಹಯಮುಖಕೃಷ್ಣ” ಎಂಬ ಅಂಕಿತದಲ್ಲಿ ಉಡುಪಿಯ ಕೃಷ್ಣನನ್ನು ಕುರಿತು ಒಂದು ಕೀರ್ತನೆಯನ್ನು ರಚಿಸಿರುವರು ಈ ಕೀರ್ತನೆಯಲ್ಲಿ ಉಡುಪಿಯನ್ನು ವೈಕುಂಠಕ್ಕೆ ಹೋಲಿಸಿ, ವೈಕುಂಠಕ್ಕೂ ಉಡುಪಿಗೂ ಇರುವ ಸಾಮ್ಯ-ವೈಷಮ್ಯಗಳನ್ನು ಯುಕ್ತಿಯುಕ್ತವಾಗಿ ನಿರೂಪಿಸಿರುವುದು ಮೆಚ್ಚುವಂತಿದೆ.

“ಉಡುಪಿ ಶ್ರೀಕೃಷ್ಣ ಕೃತೀ ಮಂಜರಿ'ಯಲ್ಲಿ ಮಧ್ವಸರೋವರದ ಮಹಿಮೆ ಮತ್ತು ಉಡುಪಿಕ್ಷೇತ್ರ ಮಹಿಮೆಯನ್ನು ಕುರಿತು ಒಂದು ಕೀರ್ತನೆ ಹಾಗೂ ಸುಳಾದಿಯನ್ನು ಮತ್ತು ಶ್ರೀವಾದರಾಜರು ರಚಿಸಿರುವ ಮಧ್ವನಾಮ ಹಾಗೂ ಇದಕ್ಕೆ ಜಗನ್ನಾಥದಾಸರು ರಚಿಸಿರುವ ಫಲಸ್ತುತಿಯನ್ನು ಅನುಬಂಧದಲ್ಲಿ ಕೊಡುವುದು ಯುಕ್ತವೆಂದು ಭಾವಿಸಿ ಸೇರಿಸಲಾಗಿದೆ.

ಉಡುಪಿಯ ಶ್ರೀಕೃಷ್ಣನನ್ನು ಕುರಿತು ಹೀಗೆ ಹಲವು ಹರಿದಾಸರು ರಚಿಸಿರುವ ಕೃತಿಗಳನ್ನು ಪರಿಶೀಲಿಸಿದಾಗ ನವರಾತ್ರಿ, ದೀಪಾವಳಿ, ಯುಗಾದಿ ಹಾಗೂ

ಗೋಕುಲಾಷ್ಟಮಿಯಂತಹ ದಿನಗಳಲ್ಲಿ ಶ್ರೀಕೃಷ್ಣನಿಗೆ ಮಾಡುವ ವಿಶೇಷ ಪೂಜಾ ವಿವರಗಳು ಹಾಗೂ ಅಲಂಕಾರ ಕ್ರಮಗಳನ್ನು ಕುರಿತು ವಿವರಗಳಿಲ್ಲದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಶ್ರೀಕೃಷ್ಣಭಕ್ತರು ಇದನ್ನೋದಿ ಸೂಕ್ತ ಸಲಹೆಗಳನ್ನು ನೀಡಬೇಕಾಗಿ ವಿನಂತಿ.

ಕೆ. ಗೋಕುಲನಾಥ



# ಉಡುಪಿ ಮಹಾತ್ಮ್ಯೆ

"ಶ್ರೀಮನ್ನಾರಾಯಣನು ಪರಶುರಾಮದೇವರಾಗಿ ಅವತರಿಸಿ ಇಪ್ಪತ್ತೊಂದು ಬಾರಿ ಸಂಚರಿಸಿ, ದುಷ್ಟರಾದ ಕ್ಷತ್ರಿಯರನ್ನೆಲ್ಲಾ ಸಂಹಾರ ಮಾಡಿದರು ತನ್ಮೂಲಕ ಕ್ರೂರದಬ್ಬಾಳಿಕೆ ನಡೆಸುತ್ತಿದ್ದವರ ಆಳ್ವಿಕೆಯು ಮುಕ್ತಾಯವಾಯಿತು. ನಂತರ ಯಾಗ ವೊಂದನ್ನು ನಡೆಸಿ ಪರಮ ತಪಸ್ವಿಗಳಾದ ಕಶ್ಯಪಾದಿ ಬ್ರಾಹ್ಮಣರಿಗೆ ಆ ಸಮಸ್ತ ಭೂ ಮಂಡಲವನ್ನು ದಾನಮಾಡಿ ಧರ್ಮಶಾಸ್ತ್ರ ನೀತಿಮಾರ್ಗದರ್ಶನ ಮಾಡುವ ಮುನಿ ಜನರು ರಾಜನೀತಿಯನ್ನು ತಿಳಿಹೇಳುವಂತಹ ವ್ಯವಸ್ಥೆಯಾಗಿ ಶಾಂತಿ, ಸುಖವು ನೆಲೆ ಗೊಂಡಿತು.

ಹೀಗೆ ದಾನಮಾಡಿದ ಪ್ರದೇಶದಲ್ಲಿ ತಾವಿರಬಾರದೆಂದೆನಿಸಿ ಪರಶುರಾಮದೇವರು ದಕ್ಷಿಣ ದೇಶಕ್ಕೆ ಬಂದು ಸಹ್ಯಾದ್ರಿಪರ್ವತದ ಮೇಲಿಂದ ತಮ್ಮ ಕೊಡಲಿಯನ್ನು ಬಾಣ ವನ್ನಾಗಿ ಸ್ವೀಕರಿಸಿ ಪಶ್ಚಿಮ ಸಮುದ್ರಕ್ಕೆ ಎಸೆದು ತಮ್ಮ ಬಾಣ ಬೀಳುವಷ್ಟು ಸರಿಸಮ ಉದ್ದಕ್ಕೂ ಹಿಂದೆ ಸರಿಯುವಂತೆ ಸಮುದ್ರರಾಜನಿಗೆ ಅಪ್ಪಣೆಮಾಡಿದರು. ಅಂತೆಯೇ ಸಮುದ್ರರಾಜನಿಂದ ಪಡೆದ ಭೂಭಾಗಕ್ಕೆ ಪರಶುರಾಮದೇವರ ಸಪ್ತಕೊಂಕಣವೆಂದು ಕರೆದರು ಅವು ಅನುಕ್ರಮವಾಗಿ ಕೇರಳ, ತೌಳವ (ತುಳುನಾಡು) ಹೈವ, ಸುರಾಷ್ಟ್ರ, ಕೊಂಕಣ ಕರಹಾಟ, ಕರ್ನಾಟಕಗಳೆಂದು ಹೆಸರಾಯಿತು. 1) ಈ ಹೊಸ ನೆಲಕ್ಕೆ ಪರಶುರಾಮ ಕ್ಷೇತ್ರವೆನ್ನುವರು, ಗೋಕರ್ಣದಿಂದ ಪಯಸ್ವಿನೀ ನದೀ ತೀರದವರೆಗಿನ ಭೂಮಿಯನ್ನು ತೌಳವದೇಶ ಎಂದು ನಿರ್ದೇಶಿಸಿರುವರು, ಪರಶುರಾಮ ಕ್ಷೇತ್ರದಲ್ಲಿ

" ರಜತಪೀಠಂ ಕುಮಾರಾದ್ರಿ
ಕುಂಭಾಸೀ ಚ ಧ್ವಜೇಶ್ವರಃ
ಕ್ರೋಢ, ಗೋಕರ್ಣ, ಮೂಕಾಂಬಾಃ
ಸಪ್ತೈತಾ ಮೋಕ್ಷದಾಯಕಾ ॥

ಎಂಬ ಏಳು ಪುಣ್ಯಕ್ಷೇತ್ರಗಳು, ಮೋಕ್ಷಪ್ರದಾಯಕಗಳಾದ ಪುಣ್ಯಕ್ಷೇತ್ರಗಳೆನಿಸಿವೆ ಸಮಸ್ತ ಪರಶುರಾಮಕ್ಷೇತ್ರದ ಮಹಿಮೆಯು ಸ್ಕಂದಪುರಾಣದ ಸಹ್ಯಾದ್ರಿಖಂಡದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ ಪುರಾಣದಲ್ಲಿ ಪರಶುರಾಮಕ್ಷೇತ್ರಕ್ಕೆ ಶೂರ್ಪಾರಕ ವೆಂದೂ ಹೇಳಿದೆ.

## ತುಳುನಾಡು :

ಈ ಪುಣ್ಯನಾಡಿಗೆ ರಾಮಭೋಜ ಮಹಾನುಭಾವನನ್ನು ಪರಶುರಾಮದೇವರು ಕರೆದು ಅವನಿಗೆ ರಾಜ್ಯವಾಳುವಂತೆ ಆದೇಶಿಸಿ ಅನುಗ್ರಹಿಸಿದರು, ಉದಯಪುರ (ಉದ್ಯಾವರ) ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಮಭೋಜನು ಧರ್ಮದಿಂದ ರಾಜ್ಯಭಾರ ಮಾಡಿಕೊಂಡಿರಲಾಗಿ ಅವನಿಗೆ ಅಶ್ವಮೇಧಯಾಗವನ್ನು ಮಾಡಬೇಕೆಂಬ ಬಯಕೆಯಾಗಿ ಪರಶುರಾಮದೇವರಲ್ಲಿ ಪ್ರಾರ್ಥಿಸಿ ಅವರ ಅನುಜ್ಞೆ ಪಡೆದು, ಯಾಗ ಕಾರ್ಯದಲ್ಲಿ ತೊಡಗಿದನು ಯಾಗಮಾಡುವ ಭೂಮಿಯನ್ನು ಶುದ್ಧಮಾಡಲು ಭೂಮಿಯನ್ನು ನೇಗಿಲಿನಿಂದ ಉಳುವಾಗ ನೇಗಿಲಿಗೆ ಸಿಕ್ಕಿ ಏಳು ಹೆಡೆಯ ಸರ್ಪವೊಂದು ಸತ್ತಿತು ಅದು ನಿಜವಾದ ಸರ್ಪವಾಗಿರದೆ ದೈತ್ಯನೊಬ್ಬನು ಯಾಗಕ್ಕೆ ವಿಘ್ನಮಾಡಲು ಬಂದು ಆ ರೂಪದಲ್ಲಿ ಅಡಗಿ ಕುಳಿತಿದ್ದನು. ಪರಶುರಾಮದೇವರ ಸಂಕಲ್ಪದಂತೆ ಅವನು ಆಗ ಮೃತನಾಗಿದ್ದನು. ರಾಮಭೋಜರಾಜನಾದರೋ ನಿಜವಾದ ಸರ್ಪವು ಮೃತಿಹೊಂದಿ ತನಗೆ ಸರ್ಪದೋಷವು ಬಂತೆಂದು ಹೆದರಿ ಪರಶುರಾಮದೇವರಲ್ಲಿ ಪ್ರಾರ್ಥಿಸಿದಾಗ ಅವರು ನಿಜವಾದ ವಿಷಯವನ್ನು ತಿಳಿಸಿದರು ಆದರೂ ಮುಂದಿನ ಜನಗಳು ಸರ್ಪಹತ್ಯೆಯು ಪಾಪಕರವಲ್ಲ ಎಂದು ತಿಳಿಯಬಾರದೆಂದು ಉದ್ದೇಶಿಸಿ ಸರ್ಪದ ತೂಕದಷ್ಟು ಬಂಗಾರವನ್ನು ಬ್ರಾಹ್ಮಣರಿಗೆ ದಾನಮಾಡಲು ಹೇಳಿದರು, ಅಂತೆಯೇ ರಾಜನು ಬಂಗಾರವನ್ನು ತೂಕಮಾಡಿ (ತೂಕ-ತುಲನಮಾಡಿ) ದಾನಮಾಡಿದ ಕಾರಣ ಮೊದಲನೆಯದಾಗಿ ಈ ನಾಡು ತೌಳವನಾಡೆಂದು ಪ್ರಸಿದ್ಧಿಯಾಯಿತು, ಇದೇ ತುಳುನಾಡು

## ರಜತಪೀಠ :

ಮುಂದೆ ರಾಮಭೋಜನು ದೊಡ್ಡದಾದ ಬೆಳ್ಳಿಯಪೀಠವೊಂದನ್ನು ಮಾಡಿಸಿ ಅದರ ನಾಲ್ಕು ಮೂಲೆಗಳಲ್ಲೂ ಸರ್ಪಾಕೃತಿಯನ್ನಿರಿಸಿ, ಆ ಪೀಠದಲ್ಲಿ ಪರಶುರಾಮದೇವರನ್ನು ಕುಳ್ಳಿರಿಸಿ ಅವರ ಸಮಕ್ಷಮ ಅಶ್ವಮೇಧಯಾಗವನ್ನು ಪೂರೈಸಿ ಯಾಗದ ಪುಣ್ಯಫಲವನ್ನು ಪರಶುರಾಮದೇವರಿಗೆ ಅರ್ಪಿಸಿದನು ಆಗ ಬೆಳ್ಳಿಯ ಪೀಠ (ರಜತಪೀಠ) ದಿಂದೆದ್ದು ಪರಶುರಾಮದೇವರು ಯಾಗ ಮಾಡಿದ ಭೂಮಿಯಲ್ಲಿ ಒಂದು ಊರು ನಿರ್ಮಾಣವಾಗಿ ರಜತಪೀಠಪುರವೆಂದು ಪ್ರಸಿದ್ಧವಾಗಲಿ ಎಂದು ನುಡಿದು ರಾಜನನ್ನು ಅನುಗ್ರಹಿಸಿದರು ಮತ್ತು ಆ ಪೀಠದಲ್ಲಿ ತಾವು ಸನ್ನಿಹಿತರಾಗಿರುವುದಾಗಿ ನುಡಿದರು ರಾಜನು ದೇವಾಲಯವನ್ನು ನಿರ್ಮಿಸಿದನು ಆ ರಜತ ಪೀಠದ ನಾಲ್ಕು ಮೂಲೆ ಸರ್ಪಾಕೃತಿಯಿರುವ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ನಾಗಾಲಯವನ್ನು ನಿರ್ಮಿಸಿದನು ಅವುಗಳು 1) ಮುಚ್ಲುಕೋಡು 2) ಮಾಂಗೋಡು 3) ಅರಿಕೋಡು,

ತಾಂಗೋಡು ಎಂಬುದಾಗಿ ಕುಕ್ಕಿಕಟ್ಟೆ, ಕಡೆಕಾರು, ಉಡುಪಿಪುತ್ತೂರು, ತಾಂ
ೋಡು ಎಂಬ ಊರಲ್ಲಿದೆ. ಹೀಗೆ ಬೆಳ್ಳಿಯಪೀಠದ ಈ ಊರಿಗೆ ರಜತಪೀಠಪುರ
ಂಬ ಹೆಸರಾಯಿತು.

## ಉಡುಪಿ :

ರಜತಪೀಠಪುರಕ್ಕೆ ಚಂದ್ರನಿಂದ ಉಡುಪಿಯೆಂಬ ಹೆಸರು ಪ್ರಸಿದ್ಧವಾಗಿರುವುದು, ಕ್ಷ ಪ್ರಜಾಪತಿಯ ಶಾಪಕ್ಕೊಳಗಾದ ಚಂದ್ರನು ಈ ಕ್ಷೇತ್ರದ ಅರಣ್ಯದಲ್ಲಿ ತಪಸ್ಸು ಾಡಿ ಪರಮೇಶ್ವರನನ್ನು ಒಲಿಸಿಕೊಂಡನು ಚಂದ್ರನಿಗೊಲಿದ ಮಹೇಶ್ವರನು ಶಾಪ ಮೋಚನೆಗೈದು ತನ್ನ ಶಿರದಲ್ಲಿ ಚಂದ್ರನನ್ನು ಧರಿಸಿ ಚಂದ್ರಮೌಳೀಶ್ವರನಾದನು ಂದ್ರನು ಪೂಜಿಸಿದ ಚಂದ್ರಮೌಳೀಶ್ವರನನ್ನು ದರ್ಶನಮಾಡಿದ ನಂತರವೇ ಅನಂತೇ ರ ಮತ್ತು ಕೃಷ್ಣದೇವರನ್ನು ದರ್ಶನಮಾಡುವ ಪದ್ಧತಿ, ಹೀಗೆ ಚಂದ್ರನು ತಪಸ್ಸು ಾಡಿದ ಸ್ಥಳಕ್ಕೆ ಅಬ್ಜಾರಣ್ಯವೆಂದೂ, ರಜತಪೀಠಪುರಕ್ಕೆ ಉಡುಪಪುರ, ಉಡುಪಿ ಂದೂ ಹೆಸರಾಯಿತು ಉಡುಪನಕ್ಷತ್ರಗಳಿಗೆ ಸ್ವಾಮಿ ಎಂದರ್ಥ, ನಕ್ಷತ್ರಗಳಿಗೆ ಒಡೆ ಯನಾದ ಚಂದ್ರನಿಂದ ಉಡುಪಿ ಎಂದು ಹೆಸರು ಬಂತು.

## ೀ ಅನಂತೇಶ್ವರ (ಶ್ರೀ ಅನಂತಾಸನದೇವರು)

### ಭಕ್ತರ ಕಾಮಧೇನುವಾದ ಶ್ರೀಮದನಂತಾಸನ ದೇವರನ್ನು ಕುರಿತಾದ ಕಥೆಯು ಹೀಗಿದೆ.

ಹಿಂದೆ ವೇದಾರಣ್ಯ ಎಂಬಲ್ಲಿ ಭಾರದ್ವಾಜ ಗೋತ್ರದ ಬ್ರಾಹ್ಮಣನೊಬ್ಬನು ತ್ನೀಸಹಿತ ಅನೇಕ ಶಿಷ್ಯರೊಂದಿಗೆ ವಾಸವಾಗಿದ್ದನು ಪುತ್ರಸಂತಾನಾಪೇಕ್ಷೆಯಿಂದ ಆ ಬ್ರಹ್ಮಣನು ವೇದಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ಬಹುಕಾಲ ಸೇವಿಸು ರಲು ಒಂದು ದಿನ ಸ್ವಾಮಿಯು ಸ್ವಪ್ನದಲ್ಲಿ ದರ್ಶನವಿತ್ತು ಬ್ರಾಹ್ಮಣನನ್ನುದ್ದೇಶಿಸಿ, ಲೈ ಬ್ರಾಹ್ಮಣೋತ್ತಮನೇ ಇಲ್ಲಿಂದ ಸ್ವಲ್ಪದೂರದಲ್ಲಿರುವ ರೂಪ್ಯಪೀಠಪುರಕ್ಕೆ ನು ಪತ್ನೀಶಿಷ್ಯರೊಡಗೂಡಿ ತೆರಳಿ, ಅಲ್ಲಿರುವ ತೀರ್ಥದಲ್ಲಿ ಸ್ನಾನಮಾಡಿ ದೇವ ತೃಗಳಿಗೆ ಹಿರಣ್ಯ ಶ್ರಾದ್ಧಾದಿಗಳನ್ನು ಮಾಡಿ ಸಂತೃಪ್ತಿಗೊಳಿಸು ಮತ್ತು ಚಂದ್ರಮೌ ಶ್ವರನನ್ನು ಆರಾಧಿಸು, ಅವನ ಹಿಂಬದಿಯಲ್ಲಿರುವ ಯಜ್ಞಕುಂಡವಾಗಿದ್ದ ನಾಗಪೀಠ ಲ್ಲಿ ಕ್ಷೀರಾಭಿಷೇಕವನ್ನು ಮಾಡು ನಾನು ಹಿಂದೆ ಪರಶುರಾಮಾವತಾರ ಮಾಡಿದಾಗ ರಮೇಶ್ವರನಿಗೆ ಅವನ ಅಂತರ್ಯಾಮಿಯಾಗಿ ಲಿಂಗರೂಪದಲ್ಲಿ ಪೂಜೆಗೊಳ್ಳುವೆನೆಂದು ರಚಿತ್ತಿರುವೆನು ನೀನು ಹೀಗೆ ಪೂಜೆಗೈದರೆ ನಾನು ನಿನಗೆ ಪುತ್ರಸಂತಾನಾದಿಗಳನ್ನು

ಅನುಗ್ರಹಿಸುವೆನು" ಎಂದು ಆಜ್ಞೆಯಿತ್ತನು. ಆ ಬ್ರಾಹ್ಮಣನು ಪತ್ನೀಶಿಷ್ಯರೊಡ ಗೂಡಿ ರೂಪ್ಯಪೀಠಪುರಕ್ಕೆ ತೆರಳಿ ಪೂಜಿಸಿದಾಗ ದೇವರು ಪ್ರತ್ಯಕ್ಷನಾಗಿ ತನ್ನ ಬಲತೊಡೆಯಮೇಲೆ ಎಡಗೈಯನ್ನಿಟ್ಟು ಶೇಷದೇವರ ಮೇಲೆಕುಳಿತ ಅನಂತಾಸನ (ಅನಂತ-ಶೇಷ) ದೇವರು ಬ್ರಾಹ್ಮಣನಿಗೆ ಅನುಗ್ರಹಿಸಿ ಸ್ವಪ್ನದಲ್ಲಿ ಹೇಳಿದಂತೆ ಲಿಂಗಾಕಾರನಾಗಿ ನಾಗ ಪೀಠದ ಮೇಲೆ ಕಾಣಿಸಿಕೊಂಡನು. ಲಿಂಗರೂಪಿ ಅನಂತೇಶ್ವರನಾದನು "ಅನಂತಾಸನ" ಎಂದರೆ ಶೇಷದೇವರನ್ನೇ ಆಸನವನ್ನಾಗಿ ಉಳ್ಳ ಮಹಾವಿಷ್ಣುವೇ ಹೊರತು ರುದ್ರಾದಿ ಗಳಲ್ಲ ಆದರೂ ಜಗತ್ತಿನಲ್ಲಿ ರುದ್ರನಲ್ಲದೆ ಬೇರೆಯವರು ಲಿಂಗರೂಪಿಯಾಗಿ ಕಂಡು ಬರದಿದ್ದರೂ ವಿಷ್ಣು ಲಿಂಗರೂಪದಲ್ಲಿಯೇ ದರ್ಶನಕೊಡುತ್ತೇನೆಂದು ಒಬ್ಬ ಬ್ರಾಹ್ಮಣ ನಿಗೆ ವರವಿತ್ತಕಾರಣ ಲಿಂಗರೂಪಿಯಾಗಿರುತ್ತಾನೆ ಭಾಗವತದಲ್ಲಿ ಎಲ್ಲಾ ರೂಪ ಗಳೂ ನಾರಾಯಣನನ್ನೇ ಹೋಲುವುದೆಂದು ಹೇಳಲಾಗಿದೆ

"ಬ್ರಹ್ಮ ವಿಷ್ಣು ಈಶ ರೂಪಾಣಿ
ತ್ರೀಣಿ ವಿಷ್ಣೋರ್ಮಹಾತ್ಮನಃ" (ಭಾಗವತ)

ಪರಶುರಾಮದೇವರು ಇಲ್ಲಿನ ವಾಸಿಗಳಿಗೆ ಕರೆದಾಗಲೆಲ್ಲಾ ಬಂದು ಅನುಗ್ರಹಿ ಸುತ್ತಾ ಇಷ್ಟಾರ್ಥಗಳನ್ನು ಕೊಡುತ್ತಿರಲಾಗಿ ಜನರು ಪರಶುರಾಮದೇವರನ್ನು ಕಾರಣ ವಿಲ್ಲದೆ ಸುಮ್ಮನೆ ಕರೆದು ಪ್ರಾರ್ಥಿಸುತ್ತಿರಲಾಗಿ ಬೇಸರಗೊಂಡ ಸ್ವಾಮಿಯು, "ಇನ್ನು ಮುಂದೆ ನಿಮಗೆ ನಾನು ಹೀಗೆ ಕಾಣಿಸುವುದಿಲ್ಲ" ಎಂದು ಹೇಳಿದರು ಅದು ಆ ಜನ ರಿಗೆ ಶಾಪದಾಯಕವಾಯಿತು ಮುಂದೊಮ್ಮೆ ಕಶ್ಯಪಮಹರ್ಷಿಗಳು ಈ ರಾಜ್ಯಕ್ಕೆ ಬರಲು ಆಗ ರಾಜನಾಗಿದ್ದ ಮಯೂರವರ್ಮನು ಮುನಿಗಳನ್ನು ತನ್ನ ಅರಮನೆಗೆ ದಯಮಾಡಿಸಿ ತನ್ನ ಆತಿಥ್ಯವನ್ನು ಸ್ವೀಕರಿಬೇಕೆಂದು ಪ್ರಾರ್ಥನೆ ಮಾಡಿಕೊಂಡನು ಆಗ ಆ ತಪೋಧನರು ರಾಜನಿಗೆ ನಿನ್ನ ರಾಜ್ಯದಲ್ಲಿ ಯೋಗ್ಯರಾದ ಬ್ರಾಹ್ಮಣರಿಲ್ಲ ಇರು ವವರೆಲ್ಲಾ ಪರಶುರಾಮರ ಅವಕೃಪೆಗೆ ಪಾತ್ರರಾಗಿರುವುದರಿಂದ ನಾನು ಬರಲಾರೆ ನೆಂದಾಗ ರಾಜನು ಮುನಿಗಳನ್ನು ಅಂತಹ ಉತ್ತಮ ಬ್ರಾಹ್ಮಣರು ಎಲ್ಲಿರುವರು ಎಂದು ಆಜ್ಞಾಪಿಸಿದರೆ ಅವರನ್ನು ಆಹ್ವಾನಿಸಿ ತನ್ನ ರಾಜ್ಯದಲ್ಲಿ ನೆಲೆಸುವಂತೆ ಬೇಡಿಕೊಳ್ಳುವು ದಾಗಿ ಭಿನ್ನವಿಸಿಕೊಂಡಾಗ, ಅಹಿಚ್ಛತ್ರಪುರದಲ್ಲಿ ಸುಬೋಧನೆಂಬ ಬ್ರಾಹ್ಮಣನು ತನ್ನ ಅಸಂಖ್ಯಾತ ಶಿಷ್ಯಸಮೂಹದೊಂದಿಗೆ ವಾಸವಾಗಿರುವನು ಆತನನ್ನು ಆತನ ಪರಿ ವಾರವನ್ನೂ ಆಹ್ವಾನಿಸು ಎಂದರು

ಅಹಿಚ್ಛತ್ರಪುರವೆಂಬುದು ಉತ್ತರ ಪಾಂಚಾಲದೇಶದ ರೋಹಿಲ ಖಂಡದಲ್ಲಿದೆ ಗೋಮತೀನದಿಯ ದಡದಮೇಲೆ ವಾಸವಾಗಿದ್ದ ಸುಬೋಧನಲ್ಲಿಗೆ ಮಯೂರವರ್ಮನು ತೆರಳಿ ಆತನನ್ನು ಬಹುಕಾಲ ಸೇವಿಸುತ್ತಿರಲು ಸುಬೋಧನು ರಾಜನಲ್ಲಿ ಸುಪ್ರೀತನಾಗಿ "ತನ್ನಿಂದೇನಾಗಬೇಕು" ಎಂದು ಕೇಳಲು ರಾಜನು ಗೋಕರ್ಣಮಂಡಲವೆಂದು ಪ್ರಸಿದ್ಧ ವಾಗಿರುವ ತುಳುವದೇಶದಲ್ಲಿ ಶ್ರೇಷ್ಠರಾದ ಬ್ರಾಹ್ಮಣರಿಲ್ಲದಿರುವುದು ಕೊರತೆಯಾಗಿದೆ.

ತಾವು ಯೋಗ್ಯ ಬ್ರಾಹ್ಮಣರನ್ನು ಅಲ್ಲಿಗೆ ಕಳುಹಿಸುವ ಅನುಗ್ರಹ ಮಾಡಬೇಕೆಂದು ಬೇಡಿಕೊಂಡನು ಮತ್ತು ಅವರಿಗೆ ಎಲ್ಲ ಅನುಕೂಲ ಮಾಡಿಕೊಟ್ಟು ಯಾವ ಭಾಧೆಯೂ ಇರದಂತೆ ನೋಡಿಕೊಳ್ಳುವೆನೆಂದು ಕಶ್ಯಪಮುನಿಗಳ ಆಜ್ಞೆ ತಿಳಿಸಿದಾಗ ಸುಬೋಧನು ತನ್ನ ಶಿಷ್ಯರಿಗೆ ಮಯೂರವರ್ಮನ ಜೊತೆ ಹೋಗಿ ತೌಳವದೇಶದಲ್ಲಿ ನೆಲೆಸುವಂತೆ ಆಜ್ಞಾಪಿಸಿದನು. ಅವನ ಆಜ್ಞೆಯಂತೆ ಅನೇಕ ಬ್ರಾಹ್ಮಣರು ಹೆಂಡತಿ ಮಕ್ಕಳು ಮತ್ತು ಪರಿವಾರದೊಂದಿಗೆ ದೂರದ ತೌಳವದೇಶಕ್ಕೆ ಬಂದರು, ಅವರಿಗೆ ಧರ್ಮಾನುಷ್ಠಾನಕ್ಕೆ ಅನುಗುಣವಾಗುವಂತೆ 32 ಗ್ರಾಮಗಳಲ್ಲಿ ನೆಲೆಗೊಳಿಸಿದನು. ಮಯೂರವರ್ಮನ ಮಗ ಚಿತ್ರಾಂಗದನು ರಾಜ್ಯವಾಳುತ್ತಿದ್ದಾಗ ಅಹಿಚ್ಛತ್ರಪುರದಿಂದ ಮತ್ತೆ ಕೆಲವು ಕುಟುಂಬಗಳು ತುಳುನಾಡಿಗೆ ಬಂದವೆಂದು ತಿಳಿಯುತ್ತದೆ. ಇಲ್ಲಿಗೆ ಬಂದವರೆಲ್ಲರೂ

ತಮ್ಮ ಸಂಸ್ಕೃತಿಯೊಂದಿಗೆ ಇಲ್ಲಿಯ ಪದ್ಧತಿಗಳನ್ನೂ ರೂಢಿಸಿಕೊಂಡರು, ಅವರುಗಳು ಭಟ್ಟ, ತಂತ್ರಿ, ಬಲ್ಲಾಳ, ಪಂಡಿತ, ಅಗ್ನಿಹೋತ್ರಿ ಇತ್ಯಾದಿ ಹೆಸರುಗಳನ್ನು ಹೊಂದಿ ಇನ್ನು ತಮ್ಮತಮ್ಮಲ್ಲಿ ತೋಟದಮನೆ, ನಡುಮನೆ, ಮೂಡುಮನೆ ಇತ್ಯಾದಿ ಪರಿಚಯಾತ್ಮಕವಾದ ಮನೆ ಗುರುತು ಸೇರಿಸಿ ಕರೆದುಕೊಳ್ಳುವುದೂ ರೂಢಿಗೆ ಬಂದಿತು.

ಭಾರತದೇಶದ ಪುಣ್ಯಕ್ಷೇತ್ರಗಳಲ್ಲಿ ಉಡುಪಿಯು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ ಇಲ್ಲಿ ದ್ವೈತಮತಸ್ಥಾಪನಾಚಾರ್ಯರಾದ ಶ್ರೀ ಮಧ್ವಾಚಾರ್ಯರು ಅವತರಿಸಿದರು ಮತ್ತು ಅವರು ಪ್ರತಿಷ್ಠಾಪಿಸಿದ ಕಡೆಗೋಲು ಹಿಡಿದ ಕೃಷ್ಣದೇವರು ಇಲ್ಲಿ ಮಧ್ವಾಚಾರ್ಯರ ಪರಂಪರಯ ಎಂಟು ಮಠದ ಯತಿಗಳಿಂದ ಪೂಜೆಗೊಳ್ಳುತ್ತಿರುವುದರಿಂದ ಉಡುಪಿಯು ಪುಣ್ಯಕ್ಷೇತ್ರದೊಂದಿಗೆ ತತ್ವಜ್ಞಾನ ಪ್ರಸಾರ ಕೇಂದ್ರವೂ ಆಗಿದೆ ವೈಷ್ಣವರಿಗೆ ಮುಖ್ಯ ಕೇಂದ್ರವಾಗಿದೆ.

## ಶ್ರೀ ವಾಯುದೇವರು :

ವೇದಗಳಲ್ಲಿ ಮೊದಲನೆಯದಾಗಿ ಹನುಮದವತಾರವನ್ನು ತ್ರೇತಾ ಯುಗದಲ್ಲಿ ಶ್ರೀ ಮಹಾವಿಷ್ಣುವು ಶ್ರೀರಾಮಚಂದ್ರನಾಗಿ ಅಯೋಧ್ಯೆಯಲ್ಲಿ ಅವತರಿಸಿದಾಗ ವಾಯುದೇವರು ಕೇಸರಿ ಅಂಜನಾಸುತರಾಗಿ ಅವತರಿಸಿದರು. ಶ್ರೀರಾಮದೇವರು ಪಿತೃವಾಕ್ಯ ಪರಿಪಾಲನೆಗಾಗಿ ಹದಿನಾಲ್ಕು ವರ್ಷ ವನವಾಸ ಸ್ವೀಕರಿಸಿ ಲಕ್ಷ್ಮಣ ಹಾಗೂ ಸೀತಾ ಮಾತೆಯೊಂದಿಗೆ ವನದಲ್ಲಿ ಪರ್ಣಕುಟೀರದಲ್ಲಿ ವಾಸವಾಗಿದ್ದಾಗ ಲಂಕೆಯ ಅರಸ ರಾವಣನು ಸೀತಾಮಾತೆಯನ್ನು (ಪ್ರತಿಕೃತಿ) ಪುಷ್ಪಕ ವಿಮಾನದಲ್ಲಿ ಕದ್ದೊಯ್ದನು. ಆಗ ಮನುಷ್ಯರಂತೆ ಶೋಕಿಸುತ್ತಾ ಶ್ರೀ ರಾಮನು ಸಂಚರಿಸುತ್ತಾ ಕಿಷ್ಕಿಂದೆಗೆ ಬರಲು ಅಂಜನಾಸುತನಾದ ಹನುಮನ ಪರಿಚಯವಾಗುತ್ತದೆ. ಅವನ ಮೂಲಕ ಸುಗ್ರೀವನ ಸಖ್ಯ ವಾಲಿಯ ವಧೆ ನಡೆದು ಸೀತಾಮಾತೆಯ ವೃತ್ತಾಂತವನ್ನು ತಿಳಿಯಲು ಸುಗ್ರೀವನ

ಕಪಿವೀರರೆಲ್ಲರೂ ದಿಕ್ಕುದಿಕ್ಕಿಗೆ ತೆರಳುವರು.

ದಕ್ಷಿಣ ದಿಕ್ಕಿಗೆ ಸೀತಾದೇವಿಯನ್ನು ಹುಡುಕಲು ಹೊರಟ ಆಂಜನೇಯನು ಶ್ರೀ ರಾಮನ ವಿಶೇಷ ಕೃಪೆಗೆ ಪಾತ್ರನಾದನು. ಆವನು ಸೀತಾದೇವಿಯನ್ನು ಲಂಕೆಯ ಅಶೋಕವನದಲ್ಲಿರುವುದನ್ನು ಕಂಡು ಶ್ರೀರಾಮನು ಕೊಟ್ಟ ಮುದ್ರಿಕೆಯನ್ನು ಕೊಟ್ಟು ಶ್ರೀರಾಮನ ಸಂದೇಶವನ್ನು ತಿಳಿಸಿ, ಮಾತೆಯು ನೀಡಿದ ಚೂಡಾಮಣಿಯನ್ನು ಶ್ರೀ ರಾಮನಿಗೆ ಒಪ್ಪಿಸಿದರು. ಈ ಸೇವೆಯಿಂದ ಸಂತುಷ್ಟನಾದ ಶ್ರೀರಾಮಚಂದ್ರನು ಮಾರುತಿಯನ್ನು ಗಾಢಾಂಗನಮಾಡಿಕೊಳ್ಳಲು ಭಕ್ತಶ್ರೇಷ್ಠನೂ ಕಾರ್ಯಸಾಧಕರೂ ಆದ ಹನುಮಂತದೇವರು ತನ್ನನ್ನೇ ಶ್ರೀರಾಮನ ಸೇವೆಗಾಗಿ ಅರ್ಪಿಸಿಕೊಳ್ಳುತ್ತಾರೆ

ಶ್ರೀರಾಮದೇವರು ಮಾರುತಿಗೆ ಭವಿಷ್ಯದ ಬ್ರಹ್ಮಪದವಿಯನ್ನು ಕರುಣಿಸಿದರು ಅನಂತರ ರಾಮ, ರಾವಣರಲ್ಲಿ ಸಂಗ್ರಾಮ ನಿಶ್ಚಯವಾಗಿ ಲಂಕೆಗೆ ಸೇತುವೆ ಕಟ್ಟಿದ್ದು, ಅಕ್ಷಾದಿ ರಾಕ್ಷಸರನ್ನು ಸಂಹರಿಸಿದ್ದು ಸಂಜೀವನ ಪರ್ವತವನ್ನು ತಂದದ್ದು ಹೀಗೆ ಶ್ರೀ ರಾಮನ ಸೇವೆಯನ್ನು ಮಾಡಿದ ಹನುಮಂತದೇವರು ಎಲ್ಲಿ ಇರುವರೋ ಅಲ್ಲಿ ಶ್ರೀ ರಾಮನಿರುವನು, ಎಲ್ಲಿ ಶ್ರೀ ರಾಮನಿರುವನೋ ಅಲ್ಲಿ ಹನುಮಂತನಿರುವನು.

ಬುದ್ಧಿರ್ಬಲಂ ಯಶೋಧೈರ್ಯಂ ನಿರ್ಭಯತ್ವಮರೋಗತಾ
ಅಜಾಢ್ಯಂ ವಾಕ್ಪಟುತ್ವಂ ಚ ಹನುಮತ್ ಸ್ಮರಣಾದ್ಭವೇತ್

ದ್ವಾಪರಯುಗದಲ್ಲಿ ಶ್ರೀಮನ್ನಾರಾಯಣನು ಶ್ರೀಕೃಷ್ಣಾವತಾರ ಮಾಡಿದಾಗ ದೇವತೆಗಳಲ್ಲನೇಕರು ಭೂಮಿಯಲ್ಲಿ ಅವತರಿಸಿದರು, ಚಂದ್ರವಂಶದ ದೊರೆ ಪಾಂಡು ರಾಜನ ಪತ್ನಿ ಕುಂತಿದೇವಿಯಲ್ಲಿ ಯುಧಿಷ್ಠರ, ಭೀಮಸೇನ, ಅರ್ಜುನನಾಗಿ, ಯಮ, ವಾಯುದೇವರು, ದೇವೇಂದ್ರರೂ, ಮಾದ್ರಿದೇವಿಯಲ್ಲಿ ನಕುಲಸಹದೇವರಾಗಿ ಅಶ್ವಿನೀ ದೇವತೆಗಳು ಅವತಾರ ಮಾಡಿದರು, ದ್ರೌಪದಿದೇವಿ ಮತ್ತು ಪಾಂಡವರನ್ನು ಶ್ರೀಕೃಷ್ಣ ಪರಮಾತ್ಮನು ಎಲ್ಲ ಸಂದರ್ಭಗಳಲ್ಲೂ ಕಷ್ಟಗಳಿಂದ ಪಾರುಮಾಡುತ್ತಿದ್ದನು. ಶ್ರೀಕೃಷ್ಣನು 'ಮಮ ಪ್ರಾಣಾ ಹಿ ಪಾಂಡವಾಃ' ಎಂದು ಹೇಳಿಕೊಂಡಿದ್ದಾನೆ. ಪಾಂಡವರು ಶ್ರೀಕೃಷ್ಣನ ಅನನ್ಯ ಭಕ್ತರಾಗಿದ್ದರು ಭೀಮಸೇನ ದೇವರು ಬಕ, ಹಿಡಂಬ, ಕೀಚಕ, ಜರಾಸಂಧಾದಿ ದೈತ್ಯರನ್ನೂ ಮತ್ಸರಿಗಳಾದ ದುರ್ಯೋಧನ ಮತ್ತು ಅವನ ನೂರು ಸಹೋದರರನ್ನೂ ಸಂಹಾರಮಾಡಿ ಭಗವಂತನ ದುಷ್ಟಶಿಕ್ಷೆ, ಶಿಷ್ಟರಕ್ಷಣೆ ಕಾರ್ಯದಲ್ಲಿ ಸಹಾಯಕರಾದರು ಸೌಗಂಧಿಕಾ ಪುಷ್ಪವನ್ನು ಮಡದಿಗೆ ತರುವ ನೆಪದಲ್ಲಿ ಕಿರ್ಮೀರಾದಿ ರಾಕ್ಷಸರನ್ನು ನಾಶಮಾಡಿದರು.

"ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ
ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇ ಚ ಬಲೇಪಿ ಚ"

## ಶ್ರೀ ಮಧ್ವಾಚಾರ್ಯರು : (ಸಾಜಕ)

ಉಡುಪಿಯ ಸಮೀಪ ಬೆಳ್ಳೆಗ್ರಾಮದಲ್ಲಿ ನಡುಮನೆ ಭಟ್ಟರು (ನಾರಾಯಣ ಭಟ್ಟರು) ಎಂಬ ಸಾತ್ವೀಕರೂ ಶಾಸ್ತ್ರಸಂಪನ್ನರೂ ಆದ ಬ್ರಾಹ್ಮಣರು ತಮ್ಮ ಪತ್ನಿ ವೇದಾವತೀ ಮತ್ತು ಒಬ್ಬ ಮಗಳೊಂದಿಗೆ ವಾಸವಾಗಿದ್ದರು, ಅವರು ಪುತ್ರಾಪೇಕ್ಷೆಯಿಂದ ಉಡುಪಿಯ ಅನಂತಾಸನದೇವರಲ್ಲಿ 12 ವರ್ಷಗಳ ಕಾಲ ಸೇವೆಮಾಡಿದರು.

ಪೂರ್ವೇಪಿ ಕರ್ದಮ ಪರಾಶರ ಪಾಂಡು ಮುಖ್ಯಾಃ ।
ಯತ್ಸೇವಯಾ ಗುಣಗಣಾಢ್ಯಮಪತ್ಯಮಾಪುಃ ॥
ತಂ ಪೂರ್ಣಸದ್ಗುಣತನುಂ ಕರುಣಾಮೃತಾಬ್ಧಿಂ ।
ನಾರಾಯಣಂ ಕುಲಪತಿಂ ಶರಣಂ ವ್ರಜೇಮ ॥

ಪೂರ್ವದಲ್ಲಿ ಕರ್ದಮ, ಪರಾಶರ. ಪಾಂಡು ಮೊದಲಾದವರು ಯಾರ ಸೇವೆ ಮಾಡಿ ಸದ್ಗುಣಶಾಲಿಗಳಾದ ಪುತ್ರಸಂತತಿಯನ್ನು ಪಡೆದರೋ. ಪೂರ್ಣಸದ್ಗುಣರೂ ಪಿಯೂ ಕರುಣಾಮೃತಸಾಗರನೂ ನಮ್ಮ ಕುಲದೇವತೆಯೂ ಆದ ಅನಂತಾಸನ ನಾರಾಯಣನನ್ನು ಶರಣು ಹೊಂದುತ್ತೇವೆ

ಎಂದು ಆ ದಂಪತಿಗಳು ಪಯೋವ್ರತಾದಿಗಳನ್ನು ಮಾಡಿ ಶ್ರೀಮದನಂತಾಸನದೇವ ರನ್ನು ಅನನ್ಯಭಕ್ತಿಯಿಂದ ಒಲಿಸಿಕೊಂಡರು ಒಂದು ವಿಶೇಷ ಪೂಜಾದಿನ ಒಬ್ಬ ವ್ಯಕ್ತಿಯ ಮೇಲೆ ಆವಾಹನೆಯಾಗಿ ಅವನು ದೇವಾಲಯದ ದೊಡ್ಡಗರುಡಗಂಭವನ್ನು ಏರಿನಿಂತು ಕೂಗುತ್ತಾ ಇನ್ನುಸ್ವಲ್ಪ ಕಾಲದಲ್ಲೇ ಒಬ್ಬಮಹಾಪುರುಷನು ಅವತಾರ ಮಾಡುತ್ತಾನೆಂದು ಹೇಳಿ ಕೆಳಗಿಳಿದನು. ಅದೇರಾತ್ರಿ ನಡುಮನೆ (ನಡ್ಯಂತಿಲ್ಲಾಯ ತುಳುವಿನಲ್ಲಿ)ಭಟ್ಟರಿಗೂ ಸ್ವಪ್ನವಾಯಿತು. ವೇದಾವತಿಯು ಗರ್ಭಿಣಿಯಾದರು ಗರ್ಭಧರಿಸಿದ ಕಾಲದಲ್ಲಿ ಶಿಶು ಜನನವಾಗುವ ಮೊದಲು ಅನೇಕ ಶುಭ ಸೂಚನೆಯಾಗಿ ನವಮಾಸ ತುಂಬಿದ ಮೇಲೆ ಶಿಶುಜನನವಾಯಿತು ಹುಟ್ಟಿದ ಮಗುವಿಗೆ ವಾಸುದೇವನೆಂದು ಹೆಸರಿಟ್ಟರು.

ಶ್ರೀ ಮಧ್ವಾಚಾರ್ಯರು ಕಲಿವರ್ಷ 4339 ಶಾಲೀವಾಹನಶಕ 1160 ವಿಳಂಬಿ ಸಂವತ್ಸರದ (ಕಿ ಶ. 1238) ಆಶ್ವಯುಜ ಶುದ್ಧ ವಿಜಯದಶಮಿಯ ದಿನ ಅವತರಿಸಿದರೆಂದು ತಿಳಿಯುತ್ತದೆ. ವಾಸುದೇವನು ತನ್ನ ಅಲೌಕಿಕ ತೇಜಸ್ಸಿನಿಂದ ತಂದೆ ತಾಯಿಗಳನ್ನೂ ಸುತ್ತಮುತ್ತಲಿನವರನ್ನು ಆನಂದಪಡಿಸುತ್ತಾ ತಾನು ಅವತಾರಪುರುಷ ನೆಂದು ತೋರಿಸಲು ಅನೇಕ ಮಹಿಮಾತಿಶಯ ಕಾರ್ಯಗಳನ್ನು ತೋರಿಸುತ್ತಾ ಬೆಳೆದನು. ಚಿಕ್ಕಬಾಲಕನು ತನ್ನ ತಂದೆ ಪುರಾಣ ಹೇಳುವಾಗ ಲಿಕುಚ ಎಂಬ ಶಬ್ಧಬಂದಾಗ ಅದರ ಅರ್ಥ ತಿಳಿಯದೇ ಹೇಳಲಿಲ್ಲ, ಈ ಮಗುವು ಆಗ ತಡೆದು ಲಿಕುಚ ಎಂದರೆ ಹಪ್ಪಲಸು ಎಂದು ಅರ್ಥ ಹೇಳಿದನು ಮತ್ತು ಒಬ್ಬ ಪಂಡಿತರು ಆ ಊರಿನಲ್ಲಿ ಪುರಾಣ ಪ್ರವಚನ ಮಾಡುವಾಗ ಹೇಳಿದ ಅರ್ಥವನ್ನು ತಪ್ಪು ಎಂದು ವಾಸುದೇವನು ತಿಳಿಸಿ ಸರಿಯಾದ ಅರ್ಥ ವಿವರಣೆಯನ್ನು ಹೇಳಿ ಎಲ್ಲರಿಗೂ ಆಶ್ಚರ್ಯವಡಿಸಿದನು

ಬಾಲಕನಿಗೆ ಐದು ವರ್ಷವಾದಾಗ ಮಧ್ಯಗೇಹಭಟ್ಟರು ಮಗನಿಗೆ ಉಪನಯನ ಮಾಡಿ ತೋಟಂತಿಲ್ಲಾಯ ಎಂಬ ಪಂಡಿತರಲ್ಲಿ ವಿದ್ಯಾಭ್ಯಾಸಕ್ಕೆ ಕಳುಹಿಸಿದರು ಅಲ್ಲಿಯೂ ವಿದ್ಯಾಭ್ಯಾಸದಲ್ಲಿ ನಿರಾಸಕ್ತನಾಗಿರುತ್ತಾನೆಂದು ಬೇರೆ ಸಹಪಾಠಿಗಳು ದೂರಿದಾಗ ವಾಸುದೇವನು ಗುರುಗಳು ಈಶಾವಾಸ್ಯೋಪನಿಷತ್ತಿನಲ್ಲಿ ಪಾಠ ಹೇಳಿದ ಮತ್ತು ಹೇಳದಿರುವ ಶ್ರುತಿಸಮ್ಮತವಾದ ಎಲ್ಲ ಅರ್ಥವನ್ನೂ ಹೇಳಿದಾಗ ಗುರುಗಳು ಸಂತೋಷಿಸಿದರು. ಗುರುಗಳ ಮಗನಿಗೆ ಚಿಕ್ಕ ಬಾಲಕನಾಗಿದ್ದಾಗಿನಿಂದ ಬಾಧಿಸುತ್ತಿದ್ದ ತಲೆಶೂಲೆಯನ್ನು ಅವನ ಕಿವಿಯಲ್ಲಿ ಸುಮ್ಮನೆ ಗಾಳಿಊದುವುದರಿಂದ ಗುಣಪಡಿಸಿ ಗುರುಕಾಣಿಕೆ ಸಲ್ಲಿಸಿದನು

ಹೀಗೆ ಗುರುಕುಲವಾಸ ಮುಗಿಸಿ ತಂದೆ ತಾಯಿಗಳಿದ್ದಲ್ಲಿಗೆ ಬಂದ ವಾಸುದೇವನು ಸನ್ಯಾಸಿಯಾಗುತ್ತೇನೆಂದು ಕೇಳಿಕೊಂಡನು. ವಾಸುದೇವನು ಆಗಲೇ ಉಡುಪಿಯಲ್ಲಿ ಅಚ್ಯುತಪ್ರೇಕ್ಷಾಚಾರ್ಯರೆಂಬ ಸನಕಾದಿಮುನಿಗಳ ಪರಂಪರೆಯಿಂದಬಂದ ಸನ್ಯಾಸಿಗಳನ್ನು ನೋಡಿ ತಾನು ಅವತರಿಸಿದ ಕಾರ್ಯಸಾಧನೆಗೆ ಸನ್ಯಾಸಿಯಾಗಬೇಕೆನಿಸಿ ಅಚ್ಯುತಪ್ರೇಕ್ಷಾಚಾರ್ಯರಲ್ಲಿ ದೀಕ್ಷೆ ಪಡೆಯಬೇಕೆಂದು ನಿಶ್ಚಯಿಸಿದನು ಅಚ್ಯುತಪ್ರೇಕ್ಷರಿಗೂ ಅವರ ಗುರುಗಳು ಅವರ ಅವಸಾನಕಾಲದಲ್ಲಿ "ನಾವು ನೀವು ತಿಳಿದಿರುವುದಕ್ಕಿಂತಲೂ ಈ ಜಗತ್ತನ್ನು ಸೃಷ್ಟಿಸಿದ ಭಗವಂತನ ಮತ್ತು ಅವನ ಸೃಷ್ಟಿಯ ನಿಜವಾದ ತತ್ತ್ವ ವಿಚಾರವನ್ನು ಸರಿಯಾಗಿ ತಿಳಿಸುವ ಜ್ಞಾನಿಯೊಬ್ಬನು ನಿನಗೆ ಶಿಷ್ಯನಾಗುತ್ತಾನೆ ನಿರೀಕ್ಷಿಸುತ್ತಿರು" ಎಂದು ಹೇಳಿದ್ದರು, ಅವರು ನಿರೀಕ್ಷಿಸುತ್ತಿರುವಾಗ ಇತ್ತ ತಂದೆಯವರಿಂದ ಸನ್ಯಾಸ ಸ್ವೀಕಾರಕ್ಕೆ ಒಪ್ಪಿಗೆ ಸಿಗದಿದ್ದಾಗ ಉಪಾಯದಿಂದ ಅವರನ್ನೊಪ್ಪಿಸಿದ ವಾಸುದೇವನು ತಂದೆ ತಾಯಿಗಳ ಅವಸಾನಕಾಲಕ್ಕೆ ನೆರವಾಗಲು ಅವರಿಗೆ ಇನ್ನೊಬ್ಬ ಪುತ್ರ ಜನಿಸುತ್ತಾನೆಂದು ಹೇಳಿ ಉಡುಪಿಗೆ ಬಂದು ಅಚ್ಯುತಪ್ರೇಕ್ಷರಲ್ಲಿ ತನ್ನ ಹನ್ನೊಂದನೇ ವಯಸ್ಸಿನಲ್ಲಿ ಸನ್ಯಾಸ ಸ್ವೀಕರಿಸಿದನು.

ಅಚ್ಯುತಪ್ರೇಕ್ಷಾಚಾರ್ಯರು ವಾಸುದೇವನಿಗೆ "ಪೂರ್ಣಪ್ರಜ್ಞ' ಎಂಬ ಹೆಸರಿನಿಂದ ತುರೀಯಾಶ್ರಮ ನೀಡಿ ಅನುಗ್ರಹಿಸಿದರು.

ಪೂರ್ಣಪ್ರಜ್ಞರು ವಿಷ್ಣು ಸರ್ವೋತ್ತಮ ಜಗತ್ತು ಸತ್ಯ, ಜೀವ ಈಶಭೇದ ಪರಮಾತ್ಮನು ಈಶ, ಜೀವರು ಅವನದಾಸರು, ಜೀವರು ಸಾಧನೆಯಿಂದ ಈಶನನ್ನು ಮೆಚ್ಚಿಸಿ ಮುಕ್ತಿ ಪಡೆಯಬೇಕು ಎಂಬ ತತ್ತ್ವವನ್ನು ಪ್ರತಿಪಾದಿಸಿದರು. ಮೊದಲು ಗುರುಗಳಾದ ಅಚ್ಯುತಪ್ರೇಕ್ಷರಿಗೇ ಅನುಮಾನಗಳನ್ನು ನಿವೃತ್ತಿಮಾಡಿ ಅವರ ಅಪ್ಪಣೆಯಂತೆ ಬದರಿಕಾಶ್ರಮಕ್ಕೆ ತೆರಳಿ ವೇದವ್ಯಾಸದೇವರನ್ನು ದರ್ಶನಮಾಡಿ ವೇದವ್ಯಾಸರಿಂದ ಅಪ್ಪಣೆ ಪಡೆದು ಬ್ರಹ್ಮಸೂತ್ರಭಾಷ್ಯ, ಗೀತಾಭಾಷ್ಯ, ಮಹಾಭಾರತ ತಾತ್ಪರ್ಯನಿರ್ಣಯ ಭಾಗವತ ತಾತ್ಪರ್ಯನಿರ್ಣಯ ಗ್ರಂಥಗಳನ್ನು ರಚಿಸಿ, ದೊಡ್ಡದಾಗಿ ಒಂದು ಶ್ರೇಷ್ಠ ಭಕ್ತಿಜ್ಞಾನ ಪ್ರತಿಪಾದಿಸುವ ಮತವನ್ನು ಸಂಸ್ಥಾಪಿಸಿದರು. ಭಾರತದ ಉದ್ದಗಲಕ್ಕೂ ಸಂಚರಿಸಿದರು ವಾಯುದೇವರಾಗಿ ಮುಂದಿನ ಬ್ರಹ್ಮಪದವಿಗೆ ಬರುವ ಋಜು ಜೀವಿಗಳಾ

ದ್ದರಿಂದ ಅವರೊಡನೆ ವಾದದಲ್ಲಿ, ತರ್ಕದಲ್ಲಿ ಜಯಿಸಲು ಯಾರಿಗೂ ಆಗುತ್ತಿರಲಿಲ್ಲ. ಪೂರ್ಣಪ್ರಜ್ಞರಿಗೆ ಮಧ್ವಾಚಾರ್ಯ, ಆನಂದತೀರ್ಥ, ಪೂರ್ಣಬೋಧ, ಸರ್ವಜ್ಞಾಚಾರ್ಯರು ಎಂದು ಅವರಿಂದ ಉಪದೇಶ, ಜ್ಞಾನಪಡೆದವರು ಕರೆದರು. ವೈಷ್ಣವ ಧರ್ಮ ಸ್ಥಾಪಕರಾದ್ದರಿಂದ ವೈಷ್ಣವಾಚಾರ್ಯರೆಂದರು. ಆನಂದತೀರ್ಥರು ದೇವತೆಗಳ ಮತ್ತು ದೈತ್ಯರ ತಾರತಮ್ಯವನ್ನು ತಿಳಿಸಿ ಬ್ರಹ್ಮದೇವರಿಂದ ಪ್ರಾರಂಭಿಸಿ ತೃಣಪರಿಯಂತರವೂ ತಾರತಮ್ಯ ಯುಕ್ತವಾದ ಜ್ಞಾನ, ದೈತ್ಯರ ತಾರತಮ್ಯವನ್ನೂ ವೇದ ಉಪನಿಷತ್, ಭಾರತ ಪಂಚರಾತ್ರಾಗಮಗಳಿಂದ ಸೋದೋಹರಣವಾಗಿ ತಿಳಿಯಪಡಿಸಿದರು. ಆಚಾರ್ಯರ ಮತ "ತತ್ವವಾದ"ವೆಂದು ಹೆಸರಾಯಿತು.

ಶ್ರೀ ಮಧ್ವಾಚಾರ್ಯರು ತಮ್ಮ ವಾದವನ್ನು ಒಪ್ಪದೇ ಇದ್ದವರನ್ನು ತಮ್ಮ ಆನಂದವಾದ ಮೃದುವಾದ, ಮಧುರವಾದ ಮಾತುಗಳಿಂದ ಶ್ರುತಿಪುರಾಣಗಳ ಉಪನಿಷತ್‌ಗಳ ಉಕ್ತಿಗಳಿಂದ ತಿಳಿಸಿ ನಿರುತ್ತರರನ್ನಾಗಿಮಾಡಿ ಸಿದ್ಧಾಂತವನ್ನು ಸ್ಥಾಪಿಸುತ್ತಿದ್ದರು.

ಅವರ ಸಿದ್ಧಾಂತದ ಪ್ರಮೇಯಗಳನ್ನು ಶ್ರೀ ವ್ಯಾಸರಾಯಸ್ವಾಮಿಗಳು ಒಂದು ಸ್ತೋತ್ರದಲ್ಲಿ ಹೀಗೆ ವಿವರಿಸಿದ್ದಾರೆ.

"ಶ್ರೀಮನ್ ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ ।
ಬೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾ ॥
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚತತ್ಸಾಧನಂ ।
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ ॥

1 ಶ್ರೀಹರಿಯೇ ಸರ್ವೋತ್ತಮನು
2 ಅವನು ನಿತ್ಯನೂ, ಸತ್ಯನೂ ಆಗಿರುವುದರಿಂದ ಅವನು ಸೃಷ್ಟಿಮಾಡಿರುವ ಈ ಜಗತ್ತು ವಾಸ್ತವವಾಗಿ ಸತ್ಯವೂ, ನಿತ್ಯವೂ ಆಗಿದೆ.
3 ಈ ಜಗತ್ತಿನಲ್ಲಿ ಜಡ-ಜೀವ, ಜಡ-ಜಡ, ಜೀವ-ಜಡ, ಜಡ-ಪರಮಾತ್ಮ ಜೀವ-ಪರಮಾತ್ಮ ಎಂಬ ಪಂಚವಿಧವಾದ ಭೇದವಿದೆ.
4 ಜೀವರಾಶಿಯು ಅವನಿಗೆ ಅಧೀನರಾಗಿರುವರು.
5 ಜೀವರುಗಳಲ್ಲಿ ತಮ್ಮ ಸಂಸ್ಕಾರಕ್ಕೆ ಸ್ವಭಾವಗಳಿಗೆ ಅನುಗುಣವಾಗಿ ಉಚ್ಚ, ನೀಚರೆಂಬ ತಾರತಮ್ಯ ಹೊಂದಿದ್ದಾರೆ.

ಶ್ರೀ ಪೂರ್ಣಪ್ರಜ್ಞಾಚಾರ್ಯರಿಗೆ ಅನೇಕ ದಿಗ್ದಂತಿ ಪಂಡಿತರು ಶಿಷ್ಯರಾಗಿ ಕೆಲವರು ಸನ್ಯಾಸ ಸ್ವೀಕರಿಸಿ ಅವರ ಮತ ಪ್ರಚಾರಕರಾದರು ಶ್ರೀ ಪದ್ಮನಾಭತೀರ್ಥರು, ಶ್ರೀ

ನರಹರಿತೀರ್ಥರು, ಶ್ರೀ ಮಾಧವತೀರ್ಥರು, ಶ್ರೀ ಅಕ್ಷೋಭ್ಯತೀರ್ಥರು ಹಾಗೂ ಅಸಂಖ್ಯ ಗೃಹಸ್ಥರೂ ಅವರೊಂದಿಗಿದ್ದರು, ಅವರಿಗೆಲ್ಲಾ ತಮ್ಮ ಕರಾರ್ಜಿತ ದೇವತಾ ಮೂರ್ತಿಗಳನ್ನು ಸಾಲಿಗ್ರಾಮಗಳನ್ನೂ ಪೂಜೆಗೆ ಕೊಟ್ಟು ಅನುಗ್ರಹಿಸಿದರು ಶ್ರೀ ಆನಂದ ತೀರ್ಥರು ಶ್ರೀಕೃಷ್ಣದೇವರನ್ನು ಉಡುಪಿಯಲ್ಲಿ ಪ್ರತಿಷ್ಠೆಗೈದು ಉಡುಪಿಯನ್ನು ತಮ್ಮ ಮುಖ್ಯ ಕೇಂದ್ರವಾಗಿಟ್ಟುಕೊಂಡು ಎರಡು ಬಾರಿ ಬದರಿಕಾಶ್ರಮಕ್ಕೆ ಯಾತ್ರೆಗೈದರು ಸಂಚಾರ ಕಾಲದಲ್ಲಿ ಅಲ್ಲಲ್ಲಿರುವ ಸಜ್ಜನರಿಗೆ ಜ್ಞಾನೋಪದೇಶ ಮಾಡಿ ಪರವಾದಿಗಳನ್ನು ಜಯಿಸುತ್ತಾ ಅನೇಕ ಅತಿಶಯವಾದ ಮಹಿಮೆಗಳನ್ನು ತೋರಿ ತಾವು ಪೂರ್ಣಜ್ಞಾನಪ್ರಜ್ಞ ವರು, ವಾಯುದೇವರ ಅವತಾರವೆಂದು ತೋರಿದರು ಒಂದುಕಡೆ ಮೂವತ್ತು ಕೊಡ ಹಾಲುಕುಡಿದು ಅನೇಕ ಗೊನೆ ಬಾಳೆಹಣ್ಣನ್ನು ತಿಂದು ತಮ್ಮನ್ನು ಪರೀಕ್ಷಿಸಿದವರಿಗೆ ಆಶ್ಚರ್ಯವುಂಟುಮಾಡಿದರು ಆಗ ಆ ಜನರು ತಪ್ಪನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ ದರು, ಗಂಗಾನದಿಯನ್ನು ತಮ್ಮ ಶಿಷ್ಯರೊಂದಿಗೆ ನೀರಿನಮೇಲೆ ನಡೆದು ದಾಟಿದರು. ವೇದಮಂತ್ರದಿಂದ ಒನಕೆ ಚಿಗುರಿ ಅದರಲ್ಲಿ ಆಗಲೇ ಫಲಪುಷ್ಪಭರಿತವಾಗುವಂತೆ ಮಾಡಿ ದರು. ಒಮ್ಮೆ ನದೀತೀರದಲ್ಲಿ ಗ್ರಹಣದಿನ ರಾತ್ರಿ ಪಾಠಮಾಡುತ್ತಿದ್ದರು, ದೀಪವು ಆರಿ ಹೋಯಿತು ಆಗ ತಮ್ಮ ಶರೀರದಿಂದ ಬೆಳಕು ಚೆಲ್ಲಿ ಎಲ್ಲಾ ಶಿಷ್ಯರಿಗೂ ಪಾಠಮಾಡಿ ದರು ಚಿಕ್ಕಬದರಿಯಿಂದ ದೊಡ್ಡಬದರಿಗೆ ಹೋಗುವಾಗ ಗಿರಿಶಿಖರಗಳನ್ನು ಒಂದು ಶಿಖರದಿಂದ ಇನ್ನೊಂದಕ್ಕೆ ಹಾರುತ್ತಾ ಗಾಳಿಯಲ್ಲಿ ಸಾಗಿದ್ದನ್ನು ಶಿಷ್ಯರಾದ ಸತ್ಯತೀರ್ಥರು ಕಂಡು ಬಂದು ತಮ್ಮ ಜೊತೆಯಲ್ಲಿದ್ದವರಿಗೆ ತಮ್ಮ ಗುರುಗಳು ಹನುಮದವತಾರ ದಂತೆಯೇ ತೋರಿದರು ಎಂದು ಹೇಳಿದರು,

ಒಮ್ಮೆ ಆಚಾರ್ಯರು ಪೂಜಾಕಾಲದಲ್ಲಿ ನೈವೇದ್ಯದ ಸಮಯದಲ್ಲಿ ಬಾಗಿಲು ಮುಚ್ಚಿದರು ಸ್ವಲ್ಪಹೊತ್ತು ತೆಗೆಯದೇ ಇದ್ದಾಗ ತ್ರಿವಿಕ್ರಮಪಂಡಿತಾಚಾರ್ಯರೆಂಬ ಅವರ ಶಿಷ್ಯರು ಬಾಗಿಲ ಸಂದಿಯಲ್ಲಿ ಇಣುಕಿ ನೋಡಿದರು ಆಗ ಆಚಾರ್ಯರು ಹನುಮ ಭೀಮ, ಮಧ್ವ ಮೂರು ರೂಪಗಳಿಂದ ರಾಮ, ಕೃಷ್ಣ, ವೇದವ್ಯಾಸರನ್ನು ಸಾಕ್ಷಾತ್ ಪೂಜಿಸುವುದನ್ನು ನೋಡಿದರು ಆಗಲೇ ಆಚಾರ್ಯರನ್ನು ಸ್ತುತಿಸುವ ವಾಯುಸ್ತುತಿ"ಎಂಬ ಸ್ತೋತ್ರವು ಅವರ ಮುಖದಿಂದ ಹೊರಟಿತು ಅದನ್ನು ಆಚಾರ್ಯರಿಗೆ ಸಮರ್ಪಿಸಿ ದಾಗ ಶ್ರೀ ಮಧ್ವಾಚಾರ್ಯರು ಶ್ರೀನರಸಿಂಹದೇವರಿಗೆ ಅರ್ಪಿಸಿ ನರಸಿಂಹದೇವರ 'ನಖ ಸ್ತುತಿ ಯನ್ನು ಹೇಳಿ ಅದನ್ನು ಆದಿ ಮತ್ತು ಅಂತ್ಯದಲ್ಲಿ ಹೇಳುವವರಿಗೆ ಎಲ್ಲಾ ಫಲಗಳು ಸಿದ್ಧಿಸಲಿ ಎಂದು ಅನುಗ್ರಹಿಸಿದರು ವಾಯುಸ್ತುತಿಯ ಒಂದೊಂದು ಶ್ಲೋಕವು ಒಂದೊಂದು ಫಲವನ್ನು ಕೊಡುತ್ತದೆ

ಹೀಗೆ ಅನೇಕ ಮಹಿಮಾತಿಶಯದಿಂದ ದ್ವೈತಮತ ಪ್ರಚಾರಮಾಡಿ ಉಡುಪಿಯಲ್ಲಿ ಶ್ರೀಕೃಷ್ಣದೇವರ ಪ್ರತಿಷ್ಠೆಗೈದ ಆಚಾರ್ಯರು ಶ್ರೀಕೃಷ್ಣನ ಪೂಜೆಮಾಡಲು ಎಂಟು ಬಾಲಕರಿಗೆ ಸನ್ಯಾಸದೀಕ್ಷೆ ನೀಡಿದರು. ಅವರುಗಳು ಈ ಕೆಳಕಂಡ ಮಠಗಳಿಗೆ ಮೂಲ ಪುರುಷರಾದರು.

| ಮೂಲಪುರುಷರು | ಅಷ್ಟಮಠಗಳ ಈಗಿನ ಹೆಸರು | |
|---|---|---|
| 1] ಶ್ರೀ ಹೃಷೀಕೇಶತೀರ್ಥರು | ಫಲಿಮಾರು ಮಠ | ದ್ವಂದ್ವ |
| 2] ಶ್ರೀ ನರಸಿಂಹತೀರ್ಥರು | ಅದಮಾರು ಮಠ | |
| 3] ಶ್ರೀ ಜನಾರ್ದನತೀರ್ಥರು | ಕೃಷ್ಣಾಪುರ ಮಠ | |
| 4] ಶ್ರೀ ಉಪೇಂದ್ರತೀರ್ಥರು | ಪುತ್ತಿಗೆ ಮಠ | ,, |
| 5] ಶ್ರೀ ವಾಮನತೀರ್ಥರು | ಶಿರೂರು ಮಠ | |
| 6] ಶ್ರೀ ವಿಷ್ಣುತೀರ್ಥರು | ಸೋದೆ ಮಠ | ,, |
| 7] ಶ್ರೀ ರಾಮತೀರ್ಥರು | ಕಾಣಿಯೂರು ಮಠ | |
| 8] ಶ್ರೀ ಅಧೋಕ್ಷಜತೀರ್ಥರು | ಪೇಜಾವರ ಮಠ | ,, |

ಈ ಯತಿಗಳು ಸ್ವಹಸ್ತದಿಂದ ಉಡುಪಿ ಶ್ರೀಕೃಷ್ಣದೇವರನ್ನು **ಪೂಜಿಸುವಂತೆ** ವ್ಯವಸ್ಥೆಮಾಡಿ ಪ್ರತಿ ಎರಡು ಮಠಗಳನ್ನು ದ್ವಂದ್ವಮಠಗಳೆಂದು ವ್ಯಾಪ್ತಿನೀಡಿದರು ಮುಂದೆ ಶ್ರೀಮದ್ವಾದಿರಾಜತೀರ್ಥ ಶ್ರೀಚರಣರು ಶ್ರೀಕೃಷ್ಣದೇವರ ಗುಡಿ ಆವರಣದಲ್ಲಿದ್ದ ಎಂಟು ಮಠಗಳಿಗೆ ರಥಬೀದಿಯಲ್ಲಿ ಎಂಟು ಪ್ರತ್ಯೇಕ ಮಠಗಳನ್ನು ನಿರ್ಮಿಸಿ ಎಂಟು ಮಠದ ಯತಿಗಳು ಎರಡೆರಡುವರ್ಷ ಶ್ರೀಕೃಷ್ಣನ ಪೂಜೆಮಾಡುವಂತೆ ಸುವ್ಯವಸ್ಥೆಗೊಳಿಸಿದರು ಮತ್ತು ಪೂಜೆಯನ್ನು ಒಬ್ಬ ಸ್ವಾಮಿಗಳಿಂದ ಇನ್ನೊಬ್ಬ ಸ್ವಾಮಿಗಳು ಸ್ವೀಕರಿಸುವ ಈ ಕಾರ್ಯಕ್ರಮ ಪರ್ಯಾಯಮಹೋತ್ಸವವೆಂಬ ಹೆಸರಿನಲ್ಲಿ ಶ್ರೀವಾದಿರಾಜಸ್ವಾಮಿಗಳು ಹಾಕಿದ ಆಚಾರ್ಯರ ಸಂಪ್ರದಾಯದಂತೆ ಈ ಉತ್ಸವ ನಯನಮನೋಹರವಾಗಿ ನಡೆಯುತ್ತದೆ ಸಾವಿರಾರು ಯಾತ್ರಿಕರು ಬಂದು ಪೂಜಾವೈಭವ ನೋಡುವ ಪರ್ಯಾಯ ಮಹೋತ್ಸವವು ಉಡುಪಿಯಷ್ಟೇ ಪ್ರಸಿದ್ಧವಾಗಿದೆ

ಶ್ರೀ ಪೂರ್ಣಬೋಧರು ತಮ್ಮ ತತ್ವಪ್ರಸಾರಕ್ಕೆ ಮತ್ತು ಜಿಜ್ಞಾಸುಗಳಿಗೆ ಜ್ಞಾನ ಮಾರ್ಗತೋರಲು ಮೂವತ್ತೇಳು ಕೃತಿಗಳನ್ನು ರಚಿಸಿದ್ದಾರೆ, ಆ ಮೂವತ್ತೇಳು ಗ್ರಂಥಗಳ ಸಮೂಹಕ್ಕೆ 'ಸರ್ವಮೂಲ ಗ್ರಂಥಗಳು" ಎಂದು ಕರೆಯುತ್ತಾರೆ ಈ ಮೂವತ್ತೇಳು ಗ್ರಂಥಗಳ ಹೆಸರನ್ನು ನಿತ್ಯ ಪಾರಾಯಣ ಮಾಡಿದರೆ ಜ್ಞಾನಸಿದ್ಧಿಯಾಗುತ್ತದೆ **ಗ್ರಂಥಗಳನ್ನು ಪೂಜಿಸಿದರ ಸರ್ವಾಭೀಷ್ಟಸಿದ್ದಿಯಾಗುತ್ತದೆ. ಈ ಸರ್ವಮೂಲ** ಗ್ರಂಥಗಳು ಸಂಸ್ಕೃತದಲ್ಲಿ ಇದ್ದು ಪೂರ್ಣಜ್ಞಾನ ನೀಡುವ ಶಾಸ್ತ್ರ ಜ್ಞಾನ. ಭಕ್ತಿ ಮುಕ್ತಿ ಫಲದಾಯಕ ಖಣಿಗಳಂತಿವೆ. ಎಲ್ಲರಿಗೂ ಪೂರ್ಣ ತಿಳಿಯಲು ಸಾಧ್ಯವಾಗದೇ ಇರಬಹುದೆಂದು ಶ್ರೀ ಜಯತೀರ್ಥಮುನಿಗಳು ಎಲ್ಲರಿಗೂ ತಿಳಿಯುವಂತೆ ಟೀಕೆ ವ್ಯಾಖ್ಯಾನಗಳನ್ನು ಬರೆದು ಟೀಕಾಚಾರ್ಯರೆಂದೇ ಪ್ರಸಿದ್ಧರಾದರು.

ಹೀಗೆ ಆಚಾರ್ಯರು ಗ್ರಂಥಗಳನ್ನು ರಚಿಸಿ ಜ್ಞಾನಮಾರ್ಗ ತೋರಿ, ಉಡುಪಿಯ ಅನಂತಾಸನದೇವರ ಮುಂದೆ ಶಿಷ್ಯರಿಗೆ ಐತರೇಯ ಉಪನಿಷತ್‌ಪಾಠ ಮಾಡುತ್ತಿರುವಾಗ ದೇವತೆಗಳು ಹೂಮಳೆಗರೆದರು. ನೋಡನೋಡುತ್ತಿರುವಾಗ ಈ ಚಮತ್ಕಾರದಿಂದ ನೆರೆದಿದ್ದವರೂ, ಶಿಷ್ಯರೂ ಕ್ಷಣಕಾಲ ಮೈಮರೆತರು ನಂತರ ನೋಡಿದಾಗ ಆಚಾರ್ಯರು ಹೂವಿನರಾಶಿಮಧ್ಯೆ ಕಣ್ಮರೆಯಾಗಿದ್ದರು ಆ ದಿನ ಪಿಂಗಳ ಸಂವತ್ಸರದ ಮಾಘ ಶುದ್ಧ ನವಮೀ ತಿಥಿ, ಗುರುಗಳು ಕಣ್ಮರೆಯಾದರೆಂದು ಶಿಷ್ಯರು ಶೋಕಗ್ರಸ್ತರಾದಾಗ ಆಚಾರ್ಯರು ತಾವು ಅದೃಶ್ಯರಾಗಿ ಉಡುಪಿಯಲ್ಲಿ ಇದ್ದೇಇರುತ್ತೇವೆ ಬದರಿಕಾಶ್ರಮದಲ್ಲಿ ದೃಶ್ಯರಾಗಿ ವೇದವ್ಯಾಸರ ಸೇವೆಯಲ್ಲಿರುತ್ತೇವೆ, ಎಂದುಅಪ್ಪಣೆ ಕೊಡಿಸಿದರು. ಇಂದಿಗೂ ಪರ್ಯಾಯ ಪೀಠದ ಸ್ವಾಮಿಗಳು ಕುಳಿತುಕೊಳ್ಳುವುದು ಆಚಾರ್ಯರ ಪೀಠದಲ್ಲಿಯೇ. ಆ ಕಾಲದಲ್ಲಿ ಆಚಾರ್ಯರೇ ಮಂತ್ರಾಕ್ಷತೆ ನೀಡಿ ಅನುಗ್ರಹಿಸುವರೆಂದು ಭಾವುಕರಾದ ಭಕ್ತರು ತಿಳಿಯುತ್ತಾರೆ.

ಆಚಾರ್ಯರು ರಚಿಸಿದ ಸರ್ವಮೂಲ ಕೃತಿಗಳಿಗೆ ಇನ್ನೂರೈವತ್ತಕ್ಕೂ ಹೆಚ್ಚು ಚಿಕ್ಕ ದೊಡ್ಡ ವ್ಯಾಖ್ಯಾನ ಗ್ರಂಥಗಳನ್ನು ಇತರರು ಸಂಸ್ಕೃತದಲ್ಲಿ ರಚಿಸಿದ್ದಾರೆ, ಇತರ ದೇಶಭಾಷೆಗಳಲ್ಲಿ ಇನ್ನೂ ಹೆಚ್ಚು ಕೃತಿಗಳಿವೆ. ಶ್ರೀಮಧ್ವಾಚಾರ್ಯರ ದ್ವೈತಸಿದ್ಧಾಂತದ ಪ್ರಮೇಯಗಳನ್ನು ಕರ್ನಾಟಕದ ಹರಿದಾಸರುಗಳು ಕೀರ್ತನೆ, ಪದ, ಸುಳಾದಿ ಉಗಾಭೋಗಗಳಲ್ಲಿ ಸಾರಾರ್ಥವನ್ನು ಪಂಡಿತ ಪಾಮರರೆಲ್ಲರಿಗೂ ತಿಳಿಯುವಂತೆ ದೇಶಭಾಷೆಗಳಲ್ಲಿ ಹಾಡಿದ್ದಾರೆ, ಹೀಗೆ ಗ್ರಂಥರಚನೆ ಪ್ರವಚನ ಮಾಡುವವರಿಗೆ, ವ್ಯಾಖ್ಯಾನ ಮಾಡುವವರಿಗೆ ವ್ಯಾಸಕೂಟವೆಂದೂ ಕೀರ್ತನೆಗೈದು ತತ್ವಾರ್ಥ ಬೋಧಿಸುವವರಿಗೂ ದಾಸಕೂಟವೆಂದೂ ಹೆಸರು ಬಂದಿದೆ.

ಹರಿದಾಸರೂ ಪರಮಾತ್ಮನು ಒಡೆಯ ಜೀವನು ದಾಸಎಂಬಂತೆ ಶ್ರೀಹರಿಯು ಪರದೇವತೆ ಇತರ ದೇವತೆಗಳೆಲ್ಲಾ ಅವನ ಆಜ್ಞಾಧಾರಕರು ಎಂಬ ತಾರತಮ್ಯತ್ವೇನಮಾಡುವ ಭಕ್ತಿ, ಭಕ್ತಿಯಪಾರಮ್ಯ ಸಾಧನಾವಿಧಾನಗಳನ್ನು ಕೀರ್ತನೆಗಳಲ್ಲಿ ನಿರೂಪಿಸಿದರು ತೀರ್ಥಕ್ಷೇತ್ರಗಳ ಮಹಿಮೆ ಅಲ್ಲಿರುವ ಭಗವಂತನ ರೂಪಸಾನ್ನಿಧ್ಯಗಳನ್ನೂ ಸ್ತುತಿಸಿರುವರು

ಶ್ರೀಮದ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣದೇವರನ್ನು ಪ್ರತಿಷ್ಠಾಪನಗೈದುದು ಒಂದು ವಿಶೇಷ, ಒಮ್ಮೆ ಶ್ರೀಮಧ್ವಾಚಾರ್ಯರು ಉಡುಪಿಯ ಸಮೀಪ ಮಲ್ಪೆಯಲ್ಲಿ ಸಮುದ್ರಸ್ನಾನಮಾಡಿ ಧ್ಯಾನಾಸಕ್ತರಾಗಿ ಕುಳಿತಿದ್ದರು, ಅದೇ ಸಮಯದಲ್ಲಿ ಉತ್ತರದೇಶದಿಂದ ಹಡಗೊಂದು ದಕ್ಷಿಣಕ್ಕೆ ಸರಕುತುಂಬಿಕೊಂಡು ಹೋಗುತ್ತಿತ್ತು, ಆಗ ಬಿರುಗಾಳಿಯೆದ್ದು ಹಡಗು ಕೆಳಗುಮೇಲಾಗುತ್ತಾ ಬಂದಾಗ ತೀರದಲ್ಲೊಬ್ಬರು ಸನ್ಯಾಸಿಗಳಿರುವುದನ್ನು ಹಡಗಿನಲ್ಲಿದ್ದವರು ಕಂಡು "ಸ್ವಾಮೀರಕ್ಷಿಸಿ' ಎಂದು ಬೇಡಿ ಕೂಗಿಕೊಂಡರು ಆಚಾರ್ಯರು ತಮ್ಮ ಕಾವಿಶಾಠಿಯನ್ನು ಬೀಸಿ ತಮ್ಮ ಮಹಿಮೆಯಿಂದ ಬಿರುಗಾಳಿ ನಿಲ್ಲಿಸಿದರು, ಮತ್ತು ಹಡಗನ್ನು ತೀರಕ್ಕೆ ಬರುವಂತೆಮಾಡಿದಾಗ 'ಹಡಗಿನವರು ನಮ್ಮನ್ನು

ರಕ್ಷಿಸಿದ ಒಡೆಯರು ನೀವು, ಈ ಹಡಗು ಮತ್ತು ಇದರಲ್ಲಿರುವ ಪದಾರ್ಥಗಳನ್ನೆಲ್ಲಾ ತಾವೇ ಸ್ವೀಕರಿಸಬೇಕೆಂದು ಪ್ರಾರ್ಥಿಸಿಕೊಂಡರು" ಗುರುಗಳು ಮೊದಲೇ ಭಗವತ್ ಪ್ರೇರಣೆಯಂತೆ ಈ ನಾಟಕವು ನಡೆದುದನ್ನು ಅವರಿಗೆ ತಿಳಿಸದೆ, "ಅಯ್ಯಾ ನಮಗೆ ನಿಮ್ಮ ಪದಾರ್ಥವು ಯಾವುದೂಬೇಡ ನಾವು ಸನ್ಯಾಸಿಗಳು ನಮಗೇಕೆ ಇವೆಲ್ಲ! ಇಲ್ಲಿರುವ ಗೋಪಿ ಚಂದನಗಳನ್ನು ನಮಗೆ ಕೊಟ್ಟರೆ ಸಾಕು" ಎಂದಾಗ, ಹಡಗಿನವರು ಒಪ್ಪಿಸಿ ನಮಸ್ಕಾರ ಗೈದರು ಆ ಗೋಪಿಚಂದನದಲ್ಲಿ ಶ್ರೀಕೃಷ್ಣ ಬಲರಾಮರ ಬಾಲರೂಪದ ಮೂರ್ತಿಗಳಿದ್ದಿತಾದುದರಿಂದ ಆಚಾರ್ಯರು ಅದನ್ನು ಕೇಳಿ ಪಡೆದರು. ಆ ಮೂರ್ತಿಗಳು ದ್ವಾರಕೆಯಿಂದ ಬಂದವು, ಆ ಕಥೆಗಳು ಹೀಗಿದೆ.

ದ್ವಾರಕೆಯಲ್ಲಿ ಶ್ರೀಕೃಷ್ಣಪರಮಾತ್ಮನು ಇರುವಾಗ ಒಮ್ಮೆ ದೇವಕೀದೇವಿಯು ತಾನು ಕಂಸನ ಬಂಧನದಲ್ಲಿದ್ದುದರಿಂದ ಗೋಕುಲದಲ್ಲಿ ಶ್ರೀಕೃಷ್ಣ ತೋರಿದ ಒಂದಾದರೂ ಬಾಲಲೀಲೆಯನ್ನು ನೋಡಲಿಲ್ಲ, ಆ ಲೀಲಾಲಾವಣ್ಯಮೂರ್ತಿಯ ಕೀರ್ತಿಗಳನ್ನು ಮಾತ್ರ ಕೇಳುತ್ತಿದ್ದೇನೆ ಎಂದು ಶ್ರೀಕೃಷ್ಣನನ್ನು ಕುರಿತು ಕೇಳಿಕೊಂಡಾಗ ಶ್ರೀಕೃಷ್ಣನು ತಾನು ಗೋಕುಲದಲ್ಲಿ ಬಾಲಕನಾಗಿ ಯಶೋದಾನಂದಗೋಪರಲ್ಲಿ ಮಾಡಿದ ಬಾಲಲೀಲೆಗಳನ್ನು ಒಂದೊಂದಾಗಿ ತೋರಿಸುತ್ತಾ ಇರಲು ಮಾಯೆಮುಸುಕಿದಂತೆ ದೇವಕಿಯು ಆನಂದಪಟ್ಟು ಶ್ರೀಕೃಷ್ಣನು ಕಡೆಗೋಲು ಹಗ್ಗ ಹಿಡಿದು ನಿಂತಿರುವ ಭಂಗಿಯನ್ನು ವಿಶ್ವಕರ್ಮನಿಂದ ಮೂರ್ತಿಮಾಡಿಸಿಕೊಂಡು ತನ್ನೊಂದಿಗೆ ಇಟ್ಟುಕೊಂಡಿದ್ದಳು. ಮುಂದೆ ರುಕ್ಮಿಣೀದೇವಿಗೆ ಆ ಮೂರ್ತಿಯನ್ನು ಕೊಡಲಾಗಿ ರುಕ್ಮಿಣಿಯು ಆ ಮೂರ್ತಿಯನ್ನು ದಿನವೂ ಪೂಜಿಸುತ್ತಿದ್ದಳು, ಮುಂದೆ ಶ್ರೀಕೃಷ್ಣಾವತಾರ ಮುಗಿದಾಗ ದ್ವಾರಕೆಯನ್ನು ಸಮುದ್ರದಿಂದ ಮುಳುಗಿಸುವ ಸಮಯದಲ್ಲಿ ಅರ್ಜುನನು ದೇವತಾ ಪ್ರತಿಮೆಗಳನ್ನು ಗೋಪೀಸರೋವರ (ಗೋಪೀತಲಾಬ್) ನಲ್ಲಿ ಸ್ಥಾಪಿಸಿದನು ಆಗ ಆ ಗೋಪೀಸರೋವರದ ಕಡೆಯಿಂದ ಬರುತ್ತಿದ್ದ ಈ ಹಡಗಿನಲ್ಲಿ ಸರಕುಗಳ ತೂಕ ಕಡಿಮೆಯಿದ್ದಕಡೆ ತೂಕ ಸಮಾನತೆಗಾಗಿ ಇರಿಸಿದ ಗೋಪಿಹೆಂಟೆಯಲ್ಲಿ ಶ್ರೀಕೃಷ್ಣಬಲರಾಮರ ಮೂರ್ತಿಗಳು ಹುದುಗಿರುವುದೂ, ಅದು ಹಡಗಿನಲ್ಲಿ ಬರುವುದೂ ಅದಕ್ಕಾಗಿ ಆಚಾರ್ಯರು ಕಡಲತೀರದಲ್ಲಿ ಕಾಯುತ್ತಿರುವುದೂ ದೈವಲೀಲೆಯಂತೆ ನಡೆಯಿತು, ಆ ಗೋಪೀಚಂದನದ ಹೆಂಟೆಯನ್ನು ಉಡುಪಿಗೆ ಆಚಾರ್ಯರು ಹೊತ್ತು ತಾವೇಹೊರಟಾಗ ಸಮೀಪದಲ್ಲೇ ಒಂದು ಹೆಂಟೆ ಒಡೆಯಿತು, ಅದರಲ್ಲಿದ್ದ ಬಲರಾಮದೇವರನ್ನು ಅಲ್ಲಿಯೇ ಪ್ರತಿಷ್ಠಾಪಿಸಿದರು. ಅದಕ್ಕೆ ವಡಭಾಂಡೇಶ್ವರ ದೇವಾಲಯವೆನ್ನುವರು

ಮುಂದೆ ಶ್ರೀಕೃಷ್ಣನಿರುವ ಗೋಪೀಚಂದನದ ಹೆಂಟೆಯನ್ನು ಉಡುಪಿಗೆ ತರುತ್ತಾ ಆಚಾರ್ಯರು ಭಕ್ತಿಯಿಂದ ಪರಮಾತ್ಮ ಮತ್ತು ಲಕ್ಷ್ಮೀದೇವಿಯವರನ್ನು ಗುಣಗಾನ ಮಾಡುತ್ತಾ ಬಂದರು, ಆ ಸ್ತೋತ್ರಗಳು ದ್ವಾದಶಸ್ತೋತ್ರವೆಂದು ಪ್ರಸಿದ್ಧಿಯಾಗಿದೆ.

ಉಡುಪಿಗೆ ಬಂದ ಆಚಾರ್ಯರು ಶ್ರೀಕೃಷ್ಣ ಪ್ರತೀಕವನ್ನು ಮಧ್ವಸರೋವರದಲ್ಲಿ

ಜಲಾವಾಸಕ್ಕಿರಿಸಿದರು, ಮಧ್ವಸರೋವರಕ್ಕೆ ಹಿಂದಿನ ಯುಗಗಳಲ್ಲಿ ಅನಂತಸರೋವರ ಚಂದ್ರಪುಷ್ಕರಿಣಿ, ವರುಣತೀರ್ಥ ಎಂದೂ ಹಸರಿದ್ದು ಆಚಾರ್ಯರು ಸನ್ಯಾಸ ಸ್ವೀಕರಿಸಿದಾಗ ಅವರ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೆ ಗಂಗಾಸ್ನಾನ ಮಾಡಲು ಅಪೇಕ್ಷೆಯಾಗಿ ತಮಗೆ ಗಂಗಾಯಾತ್ರೆಮಾಡಲು ವೃದ್ದರಾಗಿ ಅಶಕ್ತರಾಗಿದ್ದೇವೆಂದು ವ್ಯಥೆಪಟ್ಟರು ಆಗ ಶಿಷ್ಯರಾದ ಪೂರ್ಣಬೋಧರು, ಅನಂತಸರೋವರಕ್ಕೆ ಗಂಗೆಯು ಬರುವಂತೆ ಮಾಡಿದರು. ಆಗ ಗಂಗೆಪ್ರವೇಶಿಸಿದ ಜಾಗದಲ್ಲಿ ಗಂಗೆಯ ಪ್ರತಿಮೆ ಇಟ್ಟರು. ಈಗಲೂ ದಿನವೂ ಗಂಗಾಪೂಜೆಯಾಗುತ್ತಿದೆ. ಈ ರೀತಿ ಗಂಗೆಯನ್ನು ಶ್ರೀಮಧ್ವಾಚಾರ್ಯರು ತರಿಸಿದ್ದರಿಂದ ಸರಸ್ಸಿಗೆ ಮಧ್ವಸರೋವರ ಎಂದು ಹೆಸರಾಯಿತು.

ಆಚಾರ್ಯರು ಮಕರಸಂಕ್ರಾಂತಿ ಕಳೆದು ಉತ್ತರಾಯಣ ಬರಲು ಶ್ರೀಕೃಷ್ಣದೇವರ ಪತಿಷ್ಠೆಗೈಯಲು ಸಕಲ ವ್ಯವಸ್ಥೆಗಳನ್ನು ಮಾಡಿದರು ಶ್ರೀಕೃಷ್ಣನ ಪ್ರತೀಕವನ್ನು ಶಿಷ್ಯರಿಗೆ ಮೇಲೆ ತರುವಂತೆ ಆಜ್ಞಾಪಿಸಿದರು ಮೂವತ್ತೆರಡಕ್ಕೂಹೆಚ್ಚು ಶಿಷ್ಯರಿಗೆ ಒಟ್ಟಾಗಿ ಆ ಪ್ರತಿಮೆಯನ್ನು ಎತ್ತಲಾಗಲಿಲ್ಲ, ಆಚಾರ್ಯರು ಆಗ ಪ್ರತಿಮೆಯನ್ನೆತ್ತಿ ಮುದ್ದುಮಕ್ಕಳನ್ನು ಎತ್ತಿತರುವಂತೆ ತಂದು ವಿಶೇಷಪೂಜೆ, ಹೋಮ ಹವನಾದಿಗಳಿಂದ ಪ್ರತಿಷ್ಠೆ ಮಾಡಿದರು ಶ್ರೀಕೃಷ್ಣನ ಪ್ರತಿಷ್ಠಾ ಸಮಯ ಪ್ರತಿವರ್ಷವೂ ಸಪ್ತೋತ್ಸವವೆಂದು (ಚೂರ್ಣೋತ್ಸವ) ವಿಶೇಷ ಪೂಜೆಗಳು ಇಂದಿಗೂ ನಡೆಯುತ್ತವೆ.

## ಶ್ರೀಮಧ್ವಾಚಾರ್ಯರ ಅವತಾರ :

ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯ ಎಂಬ ಗ್ರಂಥದಲ್ಲಿ ತಮ್ಮ ಸಂಗತಿಗಳನ್ನು ಹೇಳಿಕೊಂಡಿದ್ದಾರೆ. ತಾವು ರಾಮಾವತಾರದಲ್ಲಿ ಹನುಮಂತನಾಗಿಯೂ, ಕೃಷ್ಣಾವತಾರಗಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಪೂರ್ಣಪ್ರಜ್ಞರಾಗಿ ಭಗವಂತನಸೇವ ಮಾಡುತ್ತಿರುವುದಾಗಿ ಹೇಳಿದ್ದಾರೆ, ಈ ಹೇಳಿಕಗೆ ಆಧಾರವಾಗಿ

"ಸಪ್ತಶಿವಾಸು ಮಾತೃಷು ತೃತೀಯಮಸ್ಯ ವೃಷಭಸ್ಯ
ದೋಹಸೇ ದಶಪ್ರಮತಿಂ ಜನಯಂತ ಯೋಷಣಃ"

ಎಂದು ಬಳಿತ್ಥಾ ಸೂಕ್ತದಲ್ಲಿ ಹೇಳಲಾಗಿದೆ.

'ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋಮಹತ್ ।
ವಾಯೋ ರಾಮ ವಚೋನಯಂ ಪ್ರಥಮಕಂ ಪೃಕ್ಷೋ
ದ್ವಿತೀಯಕಂ ಕೃತಮಿದಂ ಭಾಷ್ಯ ಹರಾತೇನಹಿ" ॥

ಎಂದು ವೇದವಚನವಿದೆ.

ಶ್ರೀಹನುಮಂತ, ಭೀಮಸೇನ, ಶ್ರೀಮಧ್ವಾಚಾರ್ಯರಾಗಿ ಶ್ರೀರಾಮದೇವರ

ಸೇವೆಯನ್ನುಮಾಡಿ ಬಕ, ಕೀಚಕ, ಹಿಡಂಬಕಾದಿ ದೈತ್ಯರನ್ನು ಸಂಹರಿಸಿ ಶ್ರೀವೇದ ವ್ಯಾಸರ ಶ್ರುತಿ ಶಾಸ್ತ್ರಗಳ ನಿಜಸಂದೇಶವನ್ನು ಪ್ರತಿಪಾದಿಸಲು ಅವತರಿಸಿದರು ಎಂದು ಹರಿವಂಶ ಪುರಾಣದಲ್ಲಿ

"ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂಚ ಕಲೌಯುಗೇ
ಯತಿರೂಪೋ ಧರೋ ವಾಯುರ್ಭವಿಷ್ಯತಿ ನ ಸಂಶಯಃ"

ಶ್ರೀಮಧ್ವಾಚಾರ್ಯರು ವಿಧಿಸಿದ ತಂತ್ರಸಾರೋಕ್ತವಾಗಿ ಸ್ವತಃ ಪರ್ಯಾಯ ಪೀಠದ ಸ್ವಾಮಿಗಳು ಉಡುಪಿ ಕೃಷ್ಣನಿಗೆ ಮಾಡುವ ವಿವಿಧಪೂಜೆ ವೈಭವಗಳು ಇನ್ನಾವ ಕ್ಷೇತ್ರಗಳಲ್ಲೂ ಇಲ್ಲ

ಇಲ್ಲಿಯ ಪೂಜೆ ವೈವಿಧ್ಯ ಮಂಗಳಾರತಿಗಳನ್ನು ಮತ್ತು ಶ್ರೀಕೃಷ್ಣ ದರ್ಶನ ಫಲ, ಮಧ್ವಸರೋವರಸ್ನಾನ ಇವುಗಳ ಮೇಲೆ ಹರಿದಾಸರು ಅನೇಕ ಸುಳಾದಿಗಳಲ್ಲಿ ಪದಗಳಲ್ಲಿ ಕೊಂಡಾಡಿದ್ದಾರೆ. ಉಡುಪಿಯ ಶ್ರೀಕೃಷ್ಣನ ದರ್ಶನ ಪ್ರಸಾದ ಭುಂಜ ನವು ಎಷ್ಟು ಪ್ರಾಕಾರವಾದದ್ದು ಎಂದು ತಿಳಿಯಲು ಆ ಕಿರ್ತನೆ, ಸುಳಾದಿಗಳನ್ನು ಓದಿ ತಿಳಿಯಬೇಕು ಮತ್ತು ಅವುಗಳನ್ನು ದಿನನಿತ್ಯವೂ ಹೇಳಿಕೊಂಡರೆ ಯಾತ್ರೆಮಾಡಿದ ಪುಣ್ಯವು ಒದಗಿಬರುತ್ತದೆ

ಪೂರ್ಣಪ್ರಜ್ಞೋ । ಜ್ಞಾನದಾತಾ । ಮಧ್ವೋವೇದ ಸ್ತುದುರಾಗಮಃ
ತತ್ವಜ್ಞೋ । ವೈಷ್ಣವಾಚಾರ್ಯೋ । ವ್ಯಾಸಶಿಷ್ಯೋ । ಯತೀಶ್ವರಃ ॥೧॥

ಆನಂದತೀರ್ಥ ನನ್ನಾಮ್ನಾಮಿದಂ ದ್ವಾದಶಕಂ ಪಠೇತ್ ।೨॥
ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿ ಸಮನ್ವಿತಾಂ ॥

ಆದುದರಿಂದ ಮಹಾನುಭಾವರಾದ ಶ್ರೀಪಾದರಾಜರು, ಶ್ರೀವ್ಯಾಸರಾಯರು ಶ್ರೀ ವಾದಿರಾಜರು, ಶ್ರೀಪುರಂದರದಾಸರು ಶ್ರೀವಿಜಯದಾಸರು ಶ್ರೀಕನಕದಾಸರು, ಶ್ರೀ ಗೋಪಾಲದಾಸರು, ಶ್ರೀಜಗನ್ನಾಥದಾಸರು ಮತ್ತು ಅನೇಕ ಮಹನೀಯರು ರಚಿಸಿರುವ ಉಡುಪಿಯಾತ್ರೆ, ಉಡುಪಿ ಶ್ರೀಕೃಷ್ಣನ ಸ್ತುತಿಗಳನ್ನು ಸಂಗ್ರಹಿಸಿ, ಶ್ರೀಕೃಷ್ಣದೇವರ ಪ್ರತಿಷ್ಠಾ ಸಪ್ತಶತಮಾನೋತ್ಸವ ವರ್ಷಗಳಲ್ಲಿ ಭಕ್ತಮಹನೀಯರ ಮಡಲಿಗೆ ಇಡುತ್ತಿದ್ದೇವೆ. ಇದರಲ್ಲಿರುವ ಕ್ಷೇತ್ರಮಹಿಮೆ ಯಾತ್ರಾ ಮಹಿಮಾಫಲ ಮುಂತಾದ ಎಲ್ಲ ವಿಷಯಗಳನ್ನು ಭಕ್ತಿಯಿಂದ ಸ್ವೀಕರಿಸಿದರೆ ನಮ್ಮ ಅಲ್ಪಕಾರ್ಯವೂ ಶ್ರೀಹರಿಗುರುಗಳ ದಯೆಯಿಂದ ಮಹಾಸಾರ್ಥಕವಾದ ಕಾರ್ಯಗಳನ್ನು ಮಾಡಿದ ಸಂತೃಪ್ತಿ ನಮಗೆ ದೊರೆಯುವುದೆಂದು ಆಶಿಸುತ್ತೇವೆ.

## ನಿತ್ಯಪೂಜಾ ವಿವರ :

ಚತುರ್ದಶ ಭುವನಗಳೊಡೆಯ ಶ್ರೀಕೃಷ್ಣನಿಗೆ ದಿನವೂ ಪರ್ಯಾಯ ಪೀಠದ ಯತಿಗಳು ಸಲ್ಲಿಸಿರುವ ಮುಖ್ಯವಾಗಿ ಚತುರ್ದಶ (ಹದಿನಾಲ್ಕು) ಪೂಜೆಗಳ ಸಂಕ್ಷೇಪವಾದ ವಿವರ.

**ಮುಖ್ಯವಾಗಿ :**

1) ನಿರ್ಮಾಲ್ಯ ವಿಸರ್ಜನೆ
2) ಉಷಃಕಾಲ ಪೂಜೆ
3) ಅಕ್ಷಯಪಾತ್ರೆ ಗೋಪೂಜೆ
4) ಪಂಚಾಮೃತಾಭಿಷೇಕ ಪೂಜೆ
5) ಉದ್ವರ್ತನ ಪೂಜೆ
6) ಕಲಶ ಪೂಜೆ
7) ತೀರ್ಥ ಪೂಜೆ
8) ಅಲಂಕಾರ ಪೂಜೆ
9) ಅವಸರಸನಕಾದಿ ಪೂಜೆ
10) ಮಹಾಪೂಜೆ
11) ಚಾಮರಸೇವೆ ಪೂಜೆ
12) ರಾತ್ರಿ ಪೂಜೆ
13) ಮಂಟಪ ಪೂಜೆ
14) ಶಯನೋತ್ಸವ ಪೂಜೆ

### 1 ನಿರ್ಮಾಲ್ಯ ವಿಸರ್ಜನೆ :

ಬೆಳಗಿನಜಾವ ನಾಲ್ಕು ಘಂಟೆಗೆ ಶ್ರೀಕೃಷ್ಣಮಂದಿರದ ಬಾಗಿಲು ತೆರೆಯುವುದು, ಪರ್ಯಾಯಪೀಠದ ಶ್ರೀಗಳವರು ಬಂದು ಮಧ್ವಸರೋವರದಲ್ಲಿ ಮಿಂದು ಜಪ, ತಪ, ತರ್ಪಣಾದಿಗಳನ್ನು ಪೂರೈಸಿಕೊಂಡು ಶ್ರೀಕೃಷ್ಣದೇವರ ಗರ್ಭಗುಡಿಗೆ ಪ್ರವೇಶಿಸುವರು ವೇದಜ್ಞರು ವೈದಿಕ ಮಂತ್ರೋಚ್ಚಾರ ಮಾಡುತ್ತಿರುವಾಗ ಶ್ರೀಗಳವರು ಹಿಂದಿನದಿನ ದೇವರಿಗೆ ಸಮರ್ಪಿಸಿದ ಹೂ, ತುಳಸಿ ಮತ್ತು ಅಲಂಕಾರಗಳನ್ನು ತೆಗೆದು, ಪುನಃ ತುಳಸಿ ಗಂಧಗಳಿಂದ ಅರ್ಚಿಸಿ ಪಂಚೋಪಚಾರ ಪೂಜೆ ಸಲ್ಲಿಸುವರು, ಅವಲಕ್ಕಿ ನೆನೆಗಡಲೆ, ಶುಂಠಿ, ಬೆಲ್ಲ ತೆಂಗಿನಕಾಯಿ, ತಾಂಬೂಲಗಳನ್ನು ಸಮರ್ಪಣೆಮಾಡಿ ಹರಿವಾಣದ ಆರತಿಯೆತ್ತುವರು

### 2 ಉಷಃಕಾಲ ಪೂಜೆ :

ನಿರ್ಮಾಲ್ಯ ವಿಸರ್ಜನಾನಂತರ ಅಭಿಷೇಕಗಳನ್ನುಮಾಡಿ ತುಳಸಿಗಂಧಾದಿ ಅಲಂಕಾರ ದೇವರಿಗೆ ಅನ್ನ, ಹಾಲು, ಮೊಸರು, ಎಳನೀರು, ಬಾಳೇಹಣ್ಣು, ತೆಂಗಿನಕಾಯಿ ತಾಂಬೂಲ ಸಮರ್ಪಿಸಿ ಎಂಟು ಆರತಿ ಬೆಳಗುತ್ತಾರೆ.

### 3 ಅಕ್ಷಯಪಾತ್ರೆ ಗೋಪೂಜೆ :

ಶ್ರೀಕೃಷ್ಣದೇವರಲ್ಲಿ ಶ್ರೀಮನ್ ಮಧ್ವಾಚಾರ್ಯರ ಕಾಲದಿಂದಲೂ ಉಪಯೋಗಿಸಲ್ಪಡುತ್ತಿರುವ ಅಕ್ಷಯಪಾತ್ರೆ ಮತ್ತು ಸಟ್ಟುಗವನ್ನು ಶ್ರೀಗಳವರು ಪೂಜಿಸುವರು. ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಸನ್ನಿಧಿಯಲ್ಲಿ ಅನ್ನದಾನವು ನಿರಂತರವೂ ನಡೆಯಲಿ ಅಕ್ಷಯವಾಗಲಿ ಎಂದು ಶಿಷ್ಯರಿಗೆ ಹರಿಸಿಕೊಟ್ಟ ಅಕ್ಷಯಪಾತ್ರೆಯಿದು

ವೃಂದಾವನದಲ್ಲಿ ಗೋವುಗಳನ್ನು ಮೇಯಿಸುತ್ತಾ ಬಾಲಲೀಲೆಯನ್ನು ತೋರಿಸುತ್ತಿದ್ದ ಶ್ರೀಕೃಷ್ಣನ ಸನ್ನಿಧಿಯಲ್ಲಿ ಗೋವುಗಳಿಗೆ ಸ್ವಚ್ಛಂದ ವಿಹಾರ ಪೂಜೆಗೆ ನಿಯತವಾಗಿರುವ ಗೋವುಗಳಿಗೆ ಶ್ರೀಗಳವರು ಪೂಜಿಸಿ ಅರಳುಬೆಲ್ಲವನ್ನು ತಿನ್ನಲು ಇಡುತ್ತಾರೆ.

### 4 ಪಂಚಾಮೃತಾಭಿಷೇಕ ಪೂಜೆ :

ಶ್ರೀಕೃಷ್ಣದೇವರಿಗೆ ಶ್ರೀಗಳವರು ಸುವರ್ಣ ನಾಣ್ಯಗಳಿಂದ ಸುವರ್ಣಕನಕಾಭಿಷೇಕ ಮಾಡುವರು. ಶಂಖಪೂಜಾನಂತರ ಪಂಚಾಮೃತಾಭಿಷೇಕ. ಗಂಧ, ತುಳಸಿ, ಪುಷ್ಪವನ್ನು ಸಮರ್ಪಿಸಿ ಅನ್ನದ ನೈವೇದ್ಯ ಮತ್ತು ಹಣ್ಣುಕಾಯಿ ತಾಂಬೂಲ ನಿವೇದಿಸಿ ಎಂಟು ಆರತಿ ಬೆಳಗುತ್ತಾರೆ.

### 5 ಉದ್ವರ್ತನ ಪೂಜೆ .

ಹೆಸರುಹಿಟ್ಟಿನಿಂದ ತಿಕ್ಕಿ ದೇವರಿಗೆ ಬಿಸಿನೀರಿನ ಅಭ್ಯಂಜನ ಮತ್ತೆ ಪಂಚೋಪಚಾರ ಪೂಜೆ ಗಂಧ, ತುಳಸಿ ಹೂಗಳಿಂದ ಅರ್ಚನೆ, ಬಿಸಿಅನ್ನ, ಹಾಲು, ಬೆಣ್ಣೆ, ಎಳನೀರು ಸಮರ್ಪಣೆ ಮತ್ತು ಒಂದು ಹರಿವಾಣ ಮಂಗಳಾರತಿ.

### 6 ಕಲಶ ಪೂಜೆ :

ಪಂಚಾಮೃತಾಭಿಷೇಕವಾದ ಮೇಲೆ ಶುದ್ಧೋದಕಸ್ನಾನ. ಅಭಿಷೇಕದಜಲತುಂಬಿದ ಬಂಗಾರದ ಕಲಶಗಳಿಗೆ ಕಲಶ ದೇವತೆಯಾದ ಶ್ರೀಹರಿಯ ನೂರುನೂರು ರೂಪಗಳ ಪೂಜೆ, ಇದೇ ಕಲಶಪೂಜೆ ಚಿನ್ನದ ಕಲಶಗಳಲ್ಲಿ ಪುಣ್ಯಜಲವನ್ನು ತುಂಬಿಸಿ ಅಭಿಮಂತ್ರಿಸಿ, ಪೂಜಿಸಿದ ನಂತರ ಶ್ರೀಕೃಷ್ಣನಿಗೆ ಪೀಠಪೂಜೆಯಾಗುತ್ತದೆ

### 7 ತೀರ್ಥಪೂಜೆ :

ಶ್ರೀಪಾದಂಗಳವರು ದೇವರಿಗೆ ಅಭಿಷೇಕಮಾಡಿ ಗಂಧ ತುಳಸಿ, ಹೂಗಳಿಂದ ಅರ್ಚಿಸಿ, ದೋಸೆ, ಬೆಣ್ಣೆ, ಬೆಲ್ಲ, ಪಾಯಸ, ತೆಂಗಿನಕಾಯಿ ಬಾಳೆಹಣ್ಣು, ತಾಂಬೂಲ ಸಮರ್ಪಿಸಿ ಎಂಟು ಮಂಗಳಾರತಿ ಬೆಳಗುತ್ತಾರೆ.

## 8 ಅಲಂಕಾರ ಪೂಜೆ

ಶ್ರೀಕೃಷ್ಣದೇವರನ್ನು ಹಲವು ಬಗೆಯ ಆಬರಣ ವಸ್ತ್ರಕವಚಗಳಿಂದ ಅಲಂಕರಿಸಿ ಸುವುದು ವಿವಿಧ ಅಲಂಕಾರ ಮಾಡಿದಾಗ ಕೃಷ್ಣನಿಗೆ ದಿನಕ್ಕೊಂದು ಹೊಸರೂಪ ಸಾಮಾನ್ಯವಾಗಿ ರವಿವಾರ ಸೂರ್ಯ, ಸೋಮವಾರ ಗೋಪಾಲ, ಮಂಗಳವಾರ ಕಿರಾತ ಬುಧವಾರ ಮತ್ತು ಗುರುವಾರ ವಿಪ್ರವೇಷ, ಶುಕ್ರವಾರ ಮೋಹಿನಿ, ಶನಿವಾರ ವೆಂಕಟ ರಮಣ ಹೀಗೆ ಶ್ರೀಹರಿಯು ಸರ್ವರೂಪಧಾರಿಯಾಗಿದ್ದಾನೆಂದು ಸೂಚಿತ ಇಷ್ಟಲ್ಲದೆ ಮತ್ಸ್ಯ, ಕೂರ್ಮ, ಪರಶುರಾಮ ರಾಮನಾಗಿ, ನಾನಾವಿಧ ಚಿನ್ನ. ಬೆಳ್ಳಿ, ಮುತ್ತು ರತ್ನ, ವಜ್ರ ಒಡವೆಗಳಿಂದ ದೇವರನ್ನು ಅಲಂಕರಿಸಲಾಗುವುದು. ಈಗ ದೇವರಿಗೆ ಎರಡು ಉರುಳಿ ನೈವೇದ್ಯ, ಪಾಯಸ, ಅರಳಿನಉಂಡೆ, ಲಡ್ಡು ಅವಲಕ್ಕಿ, ಮೊಸರು ಕೋಸುಂಬರಿ ಸಮರ್ಪಣೆ ಹಾಗೂ ಹದಿನಾರು ಮಂಗಳಾರತಿ.

## 9 ಅವಸರ ಸನಕಾದಿಪೂಜೆ :

ಶ್ರೀಮದ್ವಾಚಾರ್ಯರ ಪರಂಪರೆಯು ಸನಕಾದಿ ಮುನಿಗಳಿಂದ ಪರಂಪರಾಗತ ವಾಗಿ ಬಂದಿದೆ ಸನಕ, ಸನಂದನ, ಸನತ್ಕುಮಾರ ಇವರಿಂದ ಗೂರ್ವಾಸರು ಪರ ತೀರ್ಥರು, ಸತ್ಯಪ್ರಜ್ಞರು ಪ್ರಾಜ್ಞತೀರ್ಥರು ಇತ್ಯಾದಿ ಯತಿಗಳಿಂದ ಅಚ್ಯುತಪ್ರೇಕ್ಷರು ಅವರಿಂದ ಶ್ರೀಮಧ್ವಾಚಾರ್ಯರು ದೀಕ್ಷೆ ತೆಗೆದುಕೊಂಡು ಯತಿಗಳಾದರು. ಹೀಗೆ ಮೂಲಪುರುಷರು ಉಡುಪಿಯಲ್ಲಿ ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿ ದ್ವಾರಕೆ ಯಿಂದ ಬಂದ ಕೃಷ್ಣನನ್ನು ಪ್ರತಿಷ್ಠಿಸಿದಾಗ ಶ್ರೀಕೃಷ್ಣನ ಪೂಜೆಯನ್ನು ಸನಕಾದಿ ಮುನಿ ಗಳು ಕೇಳಿದಾಗ ಮಧ್ವಾಚಾರ್ಯರು ಏಕಾಂತದಲ್ಲಿ ಪೂಜಿಸಲು ಅವರಿಗೆ ಅವಕಾಶ ಮಾಡಿಕೊಟ್ಟರಂತೆ ಅದರಂತೆ ಅವ್ಯಾಹತವಾಗಿ ಪರ್ಯಾಯ ಶ್ರೀಗಳವರು ದೇವರ ಗರ್ಭಗುಡಿಯಿಂದ ಹೊರಬಂದು ನವಗ್ರಹ ಕಿಟಕಿಗಳನ್ನು ಬಾಗಿಲುಗಳನ್ನು ಮುಚ್ಚಿ ಬಂದು ನಂತರ ಗರ್ಭಗುಡಿಗೆ ಪ್ರವೇಶಿಸುತ್ತಾರೆ. ಬಂದವರು ದೇವರಿಗೆ ಎಂಟು ಆರತಿಗಳನ್ನು ಬೆಳಗುತ್ತಾರೆ

## 10 ಮಹಾಪೂಜೆ ·

ಸನಕಾದಿಗಳ ಪೂಜೆಯ ತರುವಾಯ ಶ್ರೀಮನ್ ಮಧ್ವಾಚಾರ್ಯರೇ ಪರ್ಯಾಯ ಶ್ರೀಪಾದಂಗಳವರಲ್ಲಿ ಸನ್ನಿಹಿತರಾಗಿ ಮಹಾಪೂಜೆ ನೆರವೇರಿಸುತ್ತಾರೆ ಎಂಬುದು ವಿಶೇಷ ನಂಬಿಕೆ

ಶ್ರೀಪಾದಂಗಳವರು ಮಧ್ವಸರೋವರದಲ್ಲಿ ಅವಗಾಹನ ಸ್ನಾನಮಾಡಿ ಬಂದು ಪೂಜೆಗೆ ಕುಳಿತಾಗ ವಿದ್ವಾಂಸರು ವೈದಿಕ ಮಂತ್ರ ಸೂಕ್ತಗಳನ್ನು ವಿಷ್ಣುಸಹಸ್ರನಾಮ ಮಂಗಳಾಷ್ಟಕಗಳನ್ನೂ ಪಠಿಸುತ್ತಾರೆ. ದೇವರಿಗೆ 14 ಸೇರು ಅಕ್ಕಿಯ ಮಹಾನ್ನೈ

ವೇದ್ಯ, ಪರಮಾನ್ನ, ಹುಗ್ಗಿ ಅಪ್ಪ, ವಡೆ, ಚಕ್ಕುಲಿ, ಗುಳ್ಳೋರಿಗೆ, ಹಣ್ಣುಕಾಯಿ ತಾಂಬೂಲ ಸಮರ್ಪಣೆ ಜೊತೆಗೆ ಬೆಳ್ಳಿಯ ಗೆರಸೆಯಲ್ಲಿ ಅನ್ನದ ಗಂಜೆತಿಳಿ ಮತ್ತು ಮತ್ತು ಅಕ್ಕಿರೊಟ್ಟಿಯನ್ನು ಸಮರ್ಪಿಸಲಾಗುತ್ತದೆ ಅನಂತರ ದೇವರಿಗೆ ಮಂಗಳಾ ರತಿಯ ಸರಮಾಲೆ ನೋಡುವುದು ಭಾಗವತರ ಭಜನೆ ವೈದಿಕರ ಮಂತ್ರಘೋಷ ಕೇಳು ವುದು ಭಕ್ತರಿಗೆ ಸಂಭ್ರಮದ ಹಬ್ಬ ಈ ಮಹಾಪೂಜೆಯ ನಂತರ ಶ್ರೀಪಾದಂಗಳವರು ಮುಖ್ಯಪ್ರಾಣದೇವರಿಗೆ ನೈವೇದ್ಯಮಾಡಿ, ಮಂಗಳಾರತಿ ಎತ್ತಿ ಪೂಜ ಮಾಡುತ್ತಾರೆ ಅನಂತರ ಮಧ್ವಾಚಾರ್ಯರಿಗೆ ಪೂಜೆಯಾಗುತ್ತದೆ, ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿ ಮಧ್ವಸರೋವರದಲ್ಲಿ ದಂಡೋದಕ ನೀಡಿ "ಭಾಗೀರಥಿ"ಪೂಜೆ ಮಾಡುತ್ತಾರೆ ತದನಂತರ ಪೂರ್ವಿಕರಾದ ಯತಿಗಳ ಬೃಂದಾವನಗಳಿಗೆ ತೀರ್ಥ ಹಾಗೂ ಹಸ್ತೋದಕ ಸಮರ್ಪಿಸಿ ಮಂಗಳಾರತಿ ಬೆಳಗುತ್ತಾರೆ ಇಷ್ಟು ಕಾರ್ಯಕ್ರಮದ ನಂತರ ಸರ್ವಜ್ಞ ಪೀಠದಲ್ಲಿ ಕುಳಿತು ತೀರ್ಥಸ್ವೀಕಾರಮಾಡಿ ಭಕ್ತ ಜನರಿಗೂ ತೀರ್ಥ ವಿತರಣೆಮಾಡಿ ಚೌಕಿಯಲ್ಲಿ ಭಿಕ್ಷಾಸ್ವೀಕಾರ ಮಾಡುವರು

ಭೋಜನಾನಂತರ ಶ್ರೀಗಳವರು ಯಾತ್ರಾರ್ಥಿಗಳಿಗೆ ಸೇವಾಕರ್ತರಿಗೆ ಶ್ರೀಕೃಷ್ಣ ದೇವರ ಪ್ರಸಾದಮಂತ್ರಾಕ್ಷತೆಗಳನ್ನು ವಿತರಣೆಮಾಡಿ ಸ್ವಲ್ಪ ವಿಶ್ರಮಿಸಿದ ಬಳಿಕ ವೇದ, ವೇದಾಂತ ಗ್ರಂಥಗಳಪಾಠಪ್ರವಚನ ನಡೆಸುತ್ತಾರೆ

ಸಂಜೆ 4-00 ಗಂಟೆಗೆ ನಗಾರಿ ಭಾರಿಸಿದ ನಂತರ ಚಂದ್ರಶಾಲೆಯಲ್ಲಿ ಪುರಾಣ ಪ್ರವಚನ, 6-00 ಗಂಟೆಗೆ ಮುಕ್ತಾಯ ಶ್ರೀಗಳವರ ಸಮ್ಮುಖದಲ್ಲಿ ವ್ಯಾಸಪೂಜೆ, ಅಷ್ಟರಲ್ಲಿ ಭಜನೆಮಾಡಲು ಭಕ್ತಮಂಡಲಿಯವರು ತುಂಬಿಕೊಳ್ಳುತ್ತಾರ ಶ್ರೀಗಳವರು ಅವಗಾಹನ ಸ್ನಾನಮಾಡಿ, ಜಪಾನುಷ್ಠಾನ ಮಾಡುತ್ತಿರುವಾಗಲೇ ಪರಿಚಾರಕರು ಉತ್ಸವದೇವರ ಮೂರ್ತಿಯನ್ನು ಅಲಂಕರಿಸುತ್ತಾರೆ

### 11 ಚಾಮರಸೇವಾ ಪೂಜೆ :

ಮಂಟಪದ ಎರಡೂಪಾಲಿನಲ್ಲಿ ದೀಪಗಳ ಮಿನುಗುಬೆಳಕಿನಲ್ಲಿ ಸಂಜೆಯ ಅನು ಷ್ಠಾನ ಪೂರೈಸಿಬಂದ ಶ್ರೀಪಾದಂಗಳವರು ದೇವರಿಗೆ ಎರಡೂಕೈಗಳಲ್ಲಿ ಚಾಮರ ಬೀಸು ತ್ತಾರೆ, ನಂತರ ಜೊತೆಯಲ್ಲಿರುವ ಪರಿಚಾರಕರಿಗ ನೀಡುತ್ತಾರ ಅವರು ಚಾಮರ ಬೀಸುತಾರೆ

### 12 ರಾತ್ರಿಪೂಜೆ :

ಪರ್ಯಾಯ ಶ್ರೀಪಾದಂಗಳವರ ಜೊತೆಯಲ್ಲಿ ಇತರೆ ಶ್ರೀಗಳವರೆಲ್ಲರೂ ಗರ್ಭ ಗುಡಿಗೆ ದಯಮಾಡಿಸುತ್ತಾರೆ ಅಷ್ಟೋತ್ತರ ನಾಮಾವಳಿ ಪೂಜೆಗಳು ಪುಷ್ಪಾರ್ಚನೆ ನಂತರ ಪುಳಿಯೋಗರ, ಪಂಚಕಜ್ಜಾಯ, ದೋಸೆ, ಹಾಲು, ಎಳನೀರು. ಹಣ್ಣು, ಕಾಯಿ, ತಾಂಬೂಲ ನಿವೇದಿಸುತ್ತಾರೆ, ಜಾಗಟೆ, ಭೇರಿ, ತಾಳ, ನಗಾರಿವಾದ್ಯ

ಅನೇಕ ವಾದ್ಯಗಳು ಭಾಗವತರ ಸಂಕೀರ್ತನೆ, ವೇದಮಂತ್ರಘೋಷದೊಂದಿಗೆ ಮಂಗಳಾರತಿಯು ಸರಮಾಲೆಗಳನ್ನು ಬೆಳಗುತ್ತಾರೆ. ನಂತರ ಮುಖ್ಯಪ್ರಾಣದೇವರಿಗೆ ರಂಗಪೂಜೆಯು ವಿಶೇಷವಾಗಿ ಪಂಚಕಜ್ಜಾಯ, ಅರಳುನೈವೇದ್ಯ ಸಮರ್ಪಣೆಯೊಂದಿಗೆ ನಡೆಯುತ್ತದೆ.

**13 ಮಂಟಪಪೂಜೆ ಅಷ್ಟಾವಧಾನ ಪೂಜೆ :**

ಶ್ರೀಪಾದಂಗಳವರು ಚಂದ್ರಶಾಲೆಗೆ ಬಂದಕೂಡಲೆ ಶ್ರೀಕೃಷ್ಣನಿಗೆ ಅಷ್ಟಾವಧಾನ ಸೇವೆಗಳು ನಡೆಯುತ್ತದೆ ನಂತರ ಶ್ರೀಗಳವರೆಲ್ಲರಿಗೂ ಗಂಧಾದ್ಯುಪಚಾರ ಮಾಲಿಕಾ ಮಂಗಳಾರತಿ ನಂತರ ಕೊಳಲುಸೇವೆ

**14 ಏಕಾಂತಸೇವಾ ಶಯನೋತ್ಸವ .**

ಶ್ರೀದೇವರಿಗೆ ಚಿನ್ನದ ತೊಟ್ಟಿಲಿನಲ್ಲಿ ಮಲಗಿಸಿ ಪಂಚೋಪಚಾರ ಪೂಜೆಸಲ್ಲಿಸಿ, ಕಷಾಯದ ಹಾಲು, ಗಂಧ, ಗಂಧವೆಣ್ಣೆ, ಪತ್ರೆ ಜಾಯಿಕಾಯಿ, ಲವಂಗ, ಅತ್ತರು ಇವುಗಳನ್ನು ಸಮರ್ಪಿಸಿ ಒಂದು ಹರಿವಾಣಾರತಿಯನ್ನು ಎತ್ತುವರು. ಅಲ್ಲಿಗೆ ರಾತ್ರೆ 11-00 ಗಂಟೆ ಆಗಿರುತ್ತದೆ ಭಕ್ತಾದಿಗಳಿಗೆ ತೀರ್ಥಪ್ರಸಾದ, ಮಂತ್ರಾಕ್ಷತೆ ವಿತರಣೆಯಾದ ನಂತರ ದಿನನಿತ್ಯದ ಪೂಜಾ ಕಾರ್ಯಕ್ರಮ ಮುಕ್ತಾಯವಾಗುತ್ತದೆ

ವಿಶೇಷ ಹಬ್ಬ ಹರಿದಿನ, ಚೂರ್ಣೋತ್ಸವ, ಪರ್ಯಾಯ ಮಹೋತ್ಸವ ಮತ್ತು ರಥೋತ್ಸವಗಳ ವೈಭವ ಪೂಜಾಲಂಕಾರ ವಿಶೇಷಗಳು ದೇವೇಂದ್ರನ ಅಮರಾವತಿಯ ಉತ್ಸವವೋ ಎಂಬಂತೆ ನಡೆಯುತ್ತದೆ

ಹೆಚ್. ಪಿ. ನಾಗರಾಜರಾವ್
ಕಡೂರು



# ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು
**ಸೋದೆ ವಾದಿರಾಜಮಠ, ಉಡುಪಿ**

## ಆಶೀರ್ವಚನ :

ಶ್ರೀಹರಿಗುರುಗಳ ಪರಮಭಕ್ತರಾದ ಶ್ರೀ **ಎಚ್. ಪಿ. ನಾಗರಾಜರಾಯರಿಗೆ** ಮಾಡುವ ಶ್ರೀಮನ್ನಾರಾಯಣ ಸ್ಮರಣೆಗಳು

ನೀವು ನಿಮ್ಮ ವಿಶೇಷ ತ್ಯಾಗಪೂರ್ಣವಾದ ಸೇವೆಯಿಂದಲೂ, ಭಕ್ತಜನರ ಆದರಪೂರಿತವಾದ ಸಹಕಾರದಿಂದಲೂ "ಕಡೂರಿನಲ್ಲಿ, ಶ್ರೀ ರಾಘವೇಂದ್ರಮಠದ ಅಭಿವೃದ್ಧಿಯನ್ನು ಸರ್ವತೋಮುಖವಾಗಿ ಸಾಧಿಸುತ್ತ ಶ್ರೀಹರಿಗುರುಗಳ ಪರಮಾನುಗ್ರಹಕ್ಕೆ ಪಾತ್ರರಾಗಿದ್ದೀರಿ ಶ್ರೀ ರಾಘವೇಂದ್ರಮಠದ ಟ್ರಸ್ಟಿನಪತಿಯಿಂದ ನೀವು ಅನೇಕ ಸಂಸ್ಕೃತ ಮತ್ತು ಕನ್ನಡಭಾಷೆಯ ಉಪಯುಕ್ತ ಕೃತಿಗಳನ್ನು ಪ್ರಕಟಿಸಿದ್ದಲ್ಲದೆ ಈಗ **"ಉಡುಪಿ ಶ್ರೀಕೃಷ್ಣದೇವರ ಸ್ತೋತ್ರ ಮತ್ತು ಕೀರ್ತನೆಗಳನ್ನು"** ಪ್ರಕಟಿಸಲು ಉದ್ಯುಕ್ತರಾಗಿರುವುದು, ತುಂಬಾ ಸಂತೋಷದ ಸಂಗತಿ ಆಗಿದೆ ಇಂತಹ ಸತ್ಕಾರ್ಯಗಳಿಂದ ಶ್ರೀಹರಿಗುರುಗಳು ಸುಪ್ರೀತರಾಗಿ ನಿಮ್ಮಿಂದ ಇತ್ಯೋಪ್ಯತಿಶಯವಾದ ಸತ್ಕಾರ್ಯಗಳು ನೆರವೇರುವಂತೆ ಪರಮಾನುಗ್ರಹ ಮಾಡಬೇಕೆಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀ ಭೂವರಾಹ ಹಯಗ್ರೀವ, ವೇದವ್ಯಾಸ ದೇವರಲ್ಲಿಯೂ ಮತ್ತು ಶ್ರೀ ಗುರುರಾಜರಲ್ಲಿಯೂ ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು
**(ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು)**
ಸೋದೆ ವಾದಿರಾಜಮಠ, ಉಡುಪಿ

# ಕೃತಿಗಳ ಕ್ರಮಸೂಚಿಕೆ

ಅ) ಉಗಾಭೋಗ ·

1. ಉಡುಪಿಯ ಕೃಷ್ಣನೆ ಸಡಗರ ನಿನಗೇಕೆ (ಮು ಮೋ)

ಆ) ಸುಳಾದಿಗಳು .



ಇ) ಕೀರ್ತನೆಗಳು :

ಪುಟ

**–0 ಕೃ ತಿ ಕಾ ರ ರು 0–**

| | | |
|---|---|---|
| ಶ್ರೀ— | ಶ್ರೀಪಾದರಾಜರ | ಕೃತಿ |
| ಹ— | ಶ್ರೀವಾದಿರಾಜರ | ,, |
| ವ್ಯಾ— | ಶ್ರೀ ವ್ಯಾಸರಾಯರ | ,, |
| ಪು— | ಶ್ರೀ ಪುರಂದರದಾಸರ | ,, |
| ವಿ – | ಶ್ರೀ ವಿಜಯದಾಸರ | ,, |
| ಕ— | ಶ್ರೀ ಕನಕದಾಸರ | ,, |
| ಗೋ— | ಶ್ರೀ ಗೋಪಾಲದಾಸರ | ,, |
| ಜ — | ಶ್ರೀ ಜಗನ್ನಾಥದಾಸರ | ,, |
| ಪ್ರ ವೆಂ— | ಶ್ರೀ ಪ್ರಸನ್ನವೆಂಕಟದಾಸರ | ,, |
| ಕ ವಿ — | ಶ್ರೀ ಕಮಲೇಶವಿಠಲದಾಸರ | ,, |
| ಗು ಗೋ— | ಶ್ರೀ ಗುರುಗೋವಿಂದವಿಠಲದಾಸರ | ,, |
| ತು— | ಶ್ರೀ ತುಪಾಕಿ ವೆಂಕಟರಮಣರ | ,, |
| ರಾ— | ಶ್ರೀರಾಮಚಂದ್ರವಿಠಲ | ,, |

ರಾ.ಹ— ಶ್ರೀ ಶ್ರೀ ವಿಶ್ವೇಂದ್ರತೀರ್ಥರ ,,
ಮು ಮೋ. ಶ್ರೀ ಮುದ್ದುಮೋಹನವಿಠಲರ ,,
ವ ಕೇ— ಶ್ರೀ ವರದಕೇಶವವಿಠಲರ ,,
ಭೀ— ಶ್ರೀ ಹರವನಹಳ್ಳಿ ಭೀಮವ್ವನವರ ,,

**ಅನುಬಂಧ – 1**



**ಸಂಸ್ಕೃತ ಸ್ತೋತ್ರಗಳ ಕ್ರಮಸೂಚಿ :**



**ಉಗಾಭೋಗ :**

–ಒಂದು–

ಉಡುಪಿಯ ಕೃಷ್ಣನೆ ಸಡಗರ ನಿನಗೇಕೆ
ಒಡವನಾದವನ ಭವ ಮಡುವಿನೊಳಗೆ ನೂಕಿ
ಮಿಡುಕಿಸಿ ನೋಡುವುದು ತರವೇನೋ ಹರಿಯೆ
ಒಡಲಿಗೋಸುಗ ನಿನ್ನ ಬೇಡ ಬಂದವನಲ್ಲ
ದೃಢಭಕುತಿ ಜ್ಞಾನಗಳ ಕೊಟ್ಟು ರಕ್ಷಿಸೋ ದೊರೆಯೆ
ಕಡಲಶಯನ ನಮ್ಮ ಮುದ್ದು ಮೋಹನವಿಠಲ ॥

# ಸುಳಾದಿಗಳು

॥ 1 ॥

ರಾಗ : ॥ ಧ್ರುವತಾಳ ॥

ಅಣು ಮೂರುತಿ ಪರಮಾಣು ಮೂರುತಿ ಇದೆ ।
ಘನ ಮೂರುತಿ ಮಹಘನವಾದ ಮೂರುತಿ ।
ತೃಣಕಾಷ್ಟ ಮೊದಲಾದ ಪರಿಪೂರ್ಣ ಮೂರುತಿ ।
ಗುಣ ತ್ರಯಾತ್ಮಕವಾದ ಗುಣವಂತ ಮೂರುತಿ ।
ಮನುಜೋತ್ತಮರವಿಡಿದು ವನಜಭವಾದ್ಯರ ।
ಮನಕೆ ಪೊಳೆವ ಮೂರುತಿ ಚಿನುಮಯ ಮೂರುತಿ ।
ದನುಜಕುಲಕೆ ದಲ್ಲಣವಾದ ಮೂರುತಿ ।
ರಣದೊಳಗರ್ಜುನನ್ನ ತನು ಉಳುಹಿದ ಮೂರುತಿ ।
ಕ್ಷಣವಗಲದೆ ಜೀವನ ಕೂಡಲಿಪ್ಪುದೆ ।
ಅನಿರುದ್ಧ ಮೂರುತಿ ಅಚ್ಯುತ ಮೂರುತಿ ।
ಜನನಿ ಗೋಪಿಯ ಮುಂದೆ ಮೊಸರು ಕಡೆವಾಗ ।
ಕುಣಿದ ಮೂರುತಿ ಅಪ್ರಮೇಯ ಮೂರುತಿ ।
ಪ್ರಣವ ಮೂರುತಿ ಮಧ್ವಮುನಿಗೊಲಿದ ಉಡುಪಿನವಾಸ ಸಿರಿಕೃಷ್ಣ ।
ಎನ್ನ ಮೂರುತಿ ವಿಜಯವಿಠ್ಠಲನಿರುತಿಪ್ಪ ॥ ॥ 1 ॥

॥ ಮಟ್ಟತಾಳ ॥

ದ್ವಾರಾವತಿ ಎತ್ತ ? ಪಡುವಲ ದಿಕ್ಕಿನ ।
ವಾರಿನಿಧಿ ಎತ್ತ ? ಗೋಪೀಚಂದನವೆತ್ತ ?
ಮಾರಾಟದ ಹಡಗ ಪೋಗಿ ಬರುವುದು ಎತ್ತ ?
ಭಾರತೀಪತಿಯಾದ ಮಧ್ವಮುನಿ ಎತ್ತ ?
ಈ ರೀತಿ ಸಂಗತಿ ಆವಲ್ಲಿ ಕಲ್ಪಿಸಿ
ತೋರಿದೆಯಾ ದೇವ ಆರು

ಬಲ್ಲರು ನಿನ್ನ ಮಹಾವಿಚಿತ್ರವ
ಸಾರಲಾಪನೆ ನಿತ್ಯ ಉಡುಪಿನ ಸಿರಿಕೃಷ್ಣ ।
ಜಾರ ಚೋರ ನಮ್ಮ ವಿಜಯ ವಿಠ್ಠಲರೇಯ
ದ್ವಾರಾವತಿ ಎತ್ತ ಪಡುವಲದಿಕ್ಕಿನ ವಾರಿನಿಧಿ ಎತ್ತ ? ॥ 2 ॥

॥ ತ್ರಿವಿಡಿತಾಳ ॥

ಅಂದು ದೇವಕೀದೇವಿ ದ್ವಾರಕಾಪುರದಲ್ಲಿ
ಒಂದು ದಿವಸ ನಿನ್ನ ಮಾಯಾ ಮುಸುಗೇ ।
ಕಂದ ನೀನಾಗಿ ಗೋಕುಲದಲ್ಲಿ ಗೋಪಿಯ ।
ಮುಂದೆ ಬಾಲಕನಾಗಿ ತೋರಿದಾಟ ।
ಒಂದಾದರೂ ನೋಡಿ ದಣಿಯಲಿಲ್ಲ ಮನಸು
ಎಂದೆನೆ ಜನನಿಯ ಮಾತುಕೇಳಿ ।
ನಂದನನಾಗಿ ತೋರುವೆನೆಂದು ಗೋ-
ವಿಂದನು ಗೋವಳ್ಳಿಯಲ್ಲಿ ನಲಿದದ್ದು ।
ಒಂದೊಂದು ತೋರುತ್ತ ಬರಲದರೊಳಗಿದೆ ।
ಚಂದವಾದ ರೂಪ ಮನ ಪೊಳಿಯೋ ।
ನಿಂದಿರವೇಳಿ ಮಗನ ಮುದ್ದಾಡಿ ನೋಡಿ ।
ತಂದೆ ಈ ರೂಪದಲಿ ಭೂಮಿಯೊಳಗೆ
ಕುಂದವರ್ಜನೆಗೊಂಡು ಕೀರ್ತಿ ಮೆರೆವುದೆಂದು
ಮಂದಹಾಸದಲ್ಲಿ ಪೇಳಲು ಕರಗೊಂಡು ।
ಒಂದು ಕೈಯಲಿ ಕಡಗೋಲು ಪಿಡಿದು
ಮತ್ತೊಂದು ಕೈಯಲಿ ನೇಣು ಧರಿಸಿ ಬಾಲ-
ನಂದದಿ ಇರಲಿತ್ತ ಭೃಷ್ಟಿ ವಿಶ್ವಕರ್ಮ ।
ನಿಂದ ಆದರಂತೆ ರಚಿಸವೇಳಿ
ನಂದದಿಂದಲೆ ತನ್ನ ಮೂಗುತಿಯನೆ ಇಟ್ಟು ।
ಸುಂದರ ವಿಗ್ರಹದೊಡನಾಡುತೆ ।
ಇಂದಿರೆ ಇರೆ ಇತ್ತ ಕಲಿಯುಗಬರೆ ಗೋಪಿ-
ಚಂದನದೊಳು ನಿನ್ನ ಅಡಗಿಸಲು ।
ಸಿಂಧುವಿನೊಳಗೊಬ್ಬ ಹಡಗದವಶಕೆ ।
ತಂದಿರೆ ತವಕದಿಂದಲಿ ಅಲ್ಲಿಂದ ।
ನಂದ ತೀರ್ಥರಿಗೊಲಿದ ಉಡುಪಿನ ಶ್ರೀಕೃಷ್ಣ ।
ಕಂದರ್ಪಪಿತ ನಮ್ಮ ವಿಜಯವಿಠ್ಠಲರೇಯ ॥ 3 ॥

॥ ಅಟ್ಟತಾಳ ॥

ಈ ಉಡುಪಿನ ಯಾತ್ರಿ ಶ್ರೀ ವೈಕುಂಠಯಾತ್ರಿ ।
ಆವಾವ ಮನುಜನು ಸೇವಿಸಲು ದುರಿ–
ತವನ ದಾವನ ಪಾವನ ಮಾಡುವ ।
ಯಾವತ್ತು ಜನುಮದ ನೋವುಕಳೆದು ತನ್ನ ।
ಸೇವೆಯೊಳಿಟ್ಟು ಅಪವರ್ಗಕೊಡುವನು ।
ದೇವಕಿನಂದನ ಕೃಷ್ಣಮೂರುತಿ ಕರು–
ಣಾವಾರಿಧಿ ನಮ್ಮ ವಿಜಯ ವಿಠ್ಠಲರೇಯ ।
ಜೀವೋತ್ತಮ ಮಧ್ವಮುನಿ ಮಾನದೈವವೇ ॥ ॥ 4 ॥

॥ ಆದಿತಾಳ ॥

ಇದೇ ಜನುಮ ಸಾರ್ಥಕ । ಇದೆ ಕಾರ್ಯ ಸಿದ್ಧಿ ।
ಇದೆ ಕುಲಕೋಟಿ ಉದ್ಧಾರ ಇದಕ್ಕಿಂತಧಿಕವಿಲ್ಲ ।
ಇದಕೆ ಸಮಾನವಿಲ್ಲ ಇದೆ ಮುಖ್ಯ ಯಾತ್ರಿ ಎನ್ನಿ ।
ಇದೆ ಇದೆ ಇದೆ ಸಿದ್ಧಿ ಯದುಕುಲೇಶನ ದಿವ್ಯ ।
ಪದಗಳ ಒಮ್ಮೆ ನೋಡೆ ಪದವಿಗೆಸೋಪಾನ ।
ಮುದದಿಂದ ಸ್ಥಿರವಹುದು ಸದಮಲಾನಂದ ಮುನಿಗೊಲಿದ
ಮುದ್ದುಕೃಷ್ಣನು ಹೃದಯ ಮನೋವಾಸ ।
ವಿಜಯ ವಿಠಲ ಪಡುವಲ ।
ಉದದಿ ತೀರದಲಿಪ್ಪ ಇದೆ ದ್ವಾರಕಿ ಎಂದು ॥ 5 ॥

॥ ಜತೆ ॥

ದುಧ್ವ ಸರೋವರ ಸ್ನಾನ । ಮುದ್ದುಕೃಷ್ಣನ ಧ್ಯಾನ ।
ಶುದ್ಧನಾಗಿ ಮಾಡೆ । ವಿಜಯ ವಿಠ್ಠಲ ಕಾವ್ಯ ॥

॥ 2 ॥

ರಾಗ : ॥ ಧ್ರುವತಾಳ ॥

ಆವ ಸುಕೃತವೋ ಆವ ಗುರುಗಳ ದಯವೊ ।
ಆವಾವ ಗೋತ್ರದಲಿ ಉದ್ಭವಿಸಿದ ಫಲವೊ ।
ಆವ ಪುತ್ರನ ಸತ್ಕರ್ಮಮಾಡಿದ ಫಲವೊ ।

ಆವ ನಿಜರಾಣಿ ನಡಕೊಂಡ ಬಗೆಯೋ ।
ಆವ ಸುಜನ ಬ್ರಾಹ್ಮಣರು ಹರಿಸಿದ ಹರಕೆಯೊ ।
ಆವ ಭಾಂಧವನು ಹೇಳಿಕೊಟ್ಟ ಮಾರ್ಗವೊ ।
ಆವ ಕ್ಷೇತ್ರದಲ್ಲಿ ಮಾಡಿದ ಸಾಧನವೊ ।
ಆವ ತಾತ್ವಿಕರು ಪ್ರೇರಿಸಿದ ಭಾಗ್ಯವೊ ।
ಆವಾವದು ಎನಗೆ ಒಂದಾದರು ತಿಳಿಯದು ।
ಭಾವಜ್ಞರು ಬಲ್ಲರು ಸ್ಥಿತಿಗತಿಯ ।
ಈ ಉಡುಪಿನ ಯಾತ್ರೆ ಮಾಡುವಗೋಸುಗ ।
ಪಾವನನಾಗಿ ನಡೆತಂದವರ ಸೌಭಾಗ್ಯ ।
ದೇವತೆಗಳು ಕೊಂಡಾಡುವರು ।
ಜೀವನ ಮುಕ್ತನಾದ ಕುಲಗೋತ್ರರೊಡಗೂಡಿ ।
ಕೈವಲ್ಯದಲ್ಲಿ ಮುಂದೆ ಸುಖಿಸುವರು ।
ಜೀವೇಶ ಮಧ್ವಮುನಿಯಿಂದ ಪೂಜೆಯಗೊಂಡ
ಶ್ರೀವಾಸ ನಮ್ಮ ವಿಜಯವಿಠಲರೇಯ ।
ಕಾವನು ಕೃಪೆಯಿಂದ ಧರ್ಮಮಾರ್ಗವ ತೋರಿ । ॥ 1 ॥

॥ ಮಠ್ಯತಾಳ ॥

ಸಕಲ ಸಂರಕ್ಷಕರು ಮಾತೆಯ ತರುವಾಯ ।
ಸಕಲ ಬೋಧಕರೆಲ್ಲ ತಂದೆಯ ತರುವಾಯ ।
ಸಕಲ ಸುಖಗಳೆಲ್ಲ ಮುಕ್ತಿಯ ತರುವಾಯ ।
ಸಕಲ ವ್ರತಂಗಳು ಹರಿದಿನದ ತರುವಾಯ ।
ಸಕಲ ಕ್ಷೇತ್ರಂಗಳು ಉಡುಪಿನ ತರುವಾಯ ।
ನಕಲ ವಿಗ್ರಹಗಳು ಕೃಷ್ಣನ ತರುವಾಯ ।
ಸಕಲ ಶಾಸ್ತ್ರಂಗಳು ಸುಧಾದ ತರುವಾಯ ।
ನಕಲ ವರ್ಣಸವೆಲ್ಲ ವೈಷ್ಣವರ ತರುವಾಯ ।
ಸಕಲೇಶ ಉಡುಪಿಯ ಕೃಷ್ಣ ವಿಜಯವಿಠಲ ।
ಅಖಿಲ ವೈಭವದಿಂ ಮೆರೆವ ತರುವಾಯ ॥ 2 ॥

॥ ತ್ರಿಪುಟತಾಳ ॥

ಎಲ್ಲಿ ಕೃಷ್ಣನ ಸದನ ಎಲ್ಲಿ ಕೃಷ್ಣನ ಸ್ನಾನ ।
ಎಲ್ಲಿ ಕೃಷ್ಣನಮೂರ್ತಿ ಎಲ್ಲಿ ಕೃಷ್ಣನ ಕೀರ್ತಿ ।

ಎಲ್ಲಿ ಕೃಷ್ಣನ ಗಾಯನ ಎಲ್ಲಿ ಕೃಷ್ಣನ ಧ್ಯಾನ ।
ಎಲ್ಲಿ ಕೃಷ್ಣನ ಸ್ತೋತ್ರ ಎಲ್ಲಿ ಕೃಷ್ಣನ ಯಾತ್ರಾ ।
ಎಲ್ಲಿ ಕೃಷ್ಣನ ಪ್ರಣಯ ಎಲ್ಲಿ ಕೃಷ್ಣನ ನಾಮ ।
ಎಲ್ಲಿ ಕೃಷ್ಣಾರಾಧನೆ ಎಲ್ಲಿ ಕೃಷ್ಣ ಶ್ರವಣ ।
ಎಲ್ಲಿ ಕೃಷ್ಣನ ಪಾದತೀರ್ಥ ಮತ್ತೆ ಪ್ರಸಾದ ।
ಎಲ್ಲಿ ಎಲ್ಯಾದರು ಇಲ್ಲವೊ ಈ ಸೊಬಗು ।
ಎಲ್ಲಿ ಈ ವೈಷ್ಣವರಾಗವ ಕಾಣೆನೊ ।
ಸಲ್ಲುವುದು ಕೀರ್ತಿ ಶ್ರೀಮದಾಚಾರ್ಯರಿ-
ಗಲ್ಲದೆ ಮತ್ತೊಂದು ದೈವವಿಲ್ಲ ।
ಎಲ್ಲ ಕ್ಷೇತ್ರಂಗಳ ಶಿರೋರತ್ನವಾಗಿದೆ ।
ಬಲ್ಲವಗೆ ಫಲದೂರವಿಲ್ಲ ।
ಬಲ್ಲಿದ ಉಡುಪಿಕೃಷ್ಣ ವಿಜಯ ವಿ-
ಠ್ಠಲನ ಮಹಿಮೆಗೆ ನಮೋ ನಮೋ ॥ 3 ॥

॥ ಅಟ್ಟತಾಳ ॥

ಉಡುಪಿನ ಯಾತ್ರೆಯ ಮಾಡಿದವ ನಿತ್ಯ ।
ಪೊಡವಿಯೊಳಗುಳ್ಳ ಯಾತ್ರೆಯ ಚರಿಸಿದವ ।
ಉಡುಪಿನ ಯಾತ್ರೆಯ ಮಾಡಿರೊ ಮಾಡಿರೋ ।
ಕೊಡಬೇಡ ಕೊಡಬೇಡ ಕೊಟ್ಟರೊಂದೇ ಕಾಸು ।
ಅಡಿಗಡಿಗೆ ನೂರುಮಡಿ ಫಲವಾಹುದು ।
ಉಡುಪಿನ ಯಾತ್ರೆಯ ಮಾಡದಿದ್ದರೆ ಪುಣ್ಯ ।
ಕೆಡುವುದು ಮುದ್ರೆಯಿಲ್ಲದ ದ್ರವ್ಯದಂತೆ ।
ಜಡಮತಿ ಕಳೆವ ವಿಜಯ ವಿಠಲಕೃಷ್ಣ
ಬಿಡನೋ ಬಿಡನೋ ತನ್ನ ಬಳಿಯ ಬಂದವನ ॥ 4 ॥

॥ ಆದಿತಾಳ ॥

ಇದೆ ಇದೆ ಭಾಗ್ಯವಿದು ಇದೆ ಇದೆ ಭಾಗ್ಯವೆಂದು ।
ಯದುಕುಲೋತ್ತಮನ ಪದಗಳ ನೋಡುವುದು ಭಾಗ್ಯ ।
ಇದೆ ಇದೆ ಇದೆ ಲಾಭ ಇದೆ ಎನಗೆ ಪರಮಲಾಭ
ಸುಧಾಗ್ರಂಥ ಓದಿದವರ ಪದದರುಶನವಾಗೆ ।

ಪದಹಸ್ತನಯನಪಾಸವದನ ಕರ್ಣನಾಲಿಗೆ ।
ಸದಾ ಇದ್ದದಕ್ಕೆ ಸಿದ್ಧ ಇದೆ ಸಾರ್ಥಕ ದಿವಸ ।
ಮುದದಿಂದ ಎನ್ನಯ ಹೃದಯಾನಂದವಾಯಿತು ।
ಮಧುಸೂದನ ಕೃಷ್ಣ ವಿಜಯ ವಿಠಲರೇಯನ ।
ನಿದರುಶನ ಯಾತ್ರಿ ಇಹದಲ್ಲಿ ಫಲವ್ಯಾಕೆ ॥ 5 ॥

॥ ಜತೆ ॥

ಶ್ರೀಮದಾಚಾರ್ಯರಿಗೆ ಒಲಿದ ಉಡುಪಿನ ಕೃಷ್ಣ
ಶ್ರೀ ಮನೋಹರ ನಮ್ಮ ವಿಜಯವಿಠಲರೇಯ ॥

॥ 3 ॥

ರಾಗ : ನೀಲಾಂಬರಿ ॥ ಧ್ರುವತಾಳ ॥

ಎತ್ತಣ ಶಬ್ಧವಿದು ಎನ್ನ ಕರ್ಣಕಿದು ಯವ್ವ
ಎತ್ತಣ ಸ್ಪರ್ಶವಿದು ಎನ್ನ ಅಂಗಕಿದು ಯವ್ವ
ಎತ್ತಣ ರಸವಿದು ಎನ್ನ ಜಿಹ್ವೆಗಿದು ಯವ್ವ
ಎತ್ತಣ ರೂಪವಿದು ಎನ್ನ ನಯನಕಿದು ಯವ್ವ
ಎತ್ತಣ ಗಂಧವಿದು ಎನ್ನ ನಾಸಿಕಕಿದು ಯವ್ವ
ಸುತ್ತಿಹ ಶಿರದಿ ನಾನಾಲತೆಯು ಎಳೆದಳಿರು
ರತುನ ಮಕುಟ ಫಣೆಯ ಕಸ್ತೂರಿ ಕಮಲನಯನ
ವೃತ್ತ ವದನವು ಮಂದಸ್ಮಿತ ಚೆಲ್ವಕಿರಿದಂತ
ತತ್ಥಳಿಪ ಕಪೋಲ ಚಲತ್ತು ಮಕರಕುಂಡಲ
ಉತ್ತಮದ ಕಂಬುಕಂಠ ಉರದಲ್ಲಿ ಶ್ರೀವತ್ಸ
ಶ್ರೀ ತುಳಸಿಮಾಲೆ ಶೃಂಗಾರಿತ್ತವಾದ ಬುಜಕೀರ್ತಿ
ತಿತ್ತಿರಿ ಮಪೂರಿ ಕೊಳಲೂದುತ್ತ ಸ್ವರವೆತ್ತಿಗಾನ
ಕುತ್ತಿಗೆಯ ಬಾಗಿ ತಾಳಕಿಕ್ಕಿ ತೋಳ ಕರವನ್ನು
ಗುತ್ತಿ ಗುಲಗುಂಜಿ ದಂಡೆ ಚಿತ್ರ ಹೊನ್ನುಂಗುರ ಬೆರಳ
ಲೊತ್ತಿ ವೇಣು ಮೀಟುತ್ತು ಮತ್ತೆ ಸರಿಗಮದಿಂದ
ಚಿತ್ತಜನಯ್ಯ ಜಗದ್ಭರಿತ ಉದರ ತ್ರಿವಳಿಯ
ಸುತ್ತಿದ ಕಟಿಯ ಕಾಂಚಿಯದಾಮ ಗುಲ್ಲಿಯ ಚೀಲ
ಬುತ್ತಿಯ ಚಿಕ್ಕವು ಬಚ್ಚಣಿಯ (ಚಿಣ್ಣಿಯ) ಕೋಲುಬಲಸೆಕ್ಕಿ
ಎತ್ತಿ ಎತ್ತಿ ಮೆಲ್ಲನೆ ಪಾದೆತ್ತಿ ಹೆಜ್ಜೆನಿಡುತ್ತ
ಮತ್ತೆ ಮಹಾ ಅರ್ಥಿಗಿನ್ನು ಪೃಥ್ವಿ ಅತುರಳಾಗಿ

ಇತ್ತ ವಿಭವು ಮುಂದತ್ತ ಚಿಂತಿಸುತಿಪ್ಪಳೊ
ಸತ್ಯಸಾಕಾರ ಸರ್ವಜ್ಞ ಗೋಪಾಲವಿಟ್ಠಲ
ಮತ್ತೆ ಈ ಉಡುಪಿನ ಕೃಷ್ಣ ಸಂತ್ತುಸುಳಿದು ಸಲಹೆನ್ನ ॥ 1 ॥

॥ ಮಠ್ಯತಾಳ ॥

ಸುಖಪೂರ್ಣ ಜ್ಞಾನಪೂರ್ಣ ಸುಖತೀರ್ಥರ ಪ್ರೀಯ
ಭಕುತವತ್ಸಲದೇವ ಬಂಧಕ ಮೋಚಕ
ಶಕುತ ಲಕುಮಿ ಮನೋಹರ ರಾಜರಾಜೇಶ್ವರ
ಮುಕುತಿದಾಯಕ ಮೂಲ ಅವತಾರ ಅಭೇದ
ನಖ ಶಿಖಪರಿಪೂರ್ಣ ನರಸಖ ನಿರ್ದೋಷ
ಸಕಲರಲ್ಲಿ ವ್ಯಾಪ್ತ ಸಕಲಸಾರ ಭೋಕ್ತ
ಭಕುತಿಯಿಂದ ಲಭ್ಯ ಬಡವ ಬಲ್ಲಿದೆನ್ನ
ಮಕ್ಕಳ ಮಾಣಿಕ್ಯ ದೇವಕಿ ಪುಣ್ಯೋದಯ
ರಕ್ಕಸಾಂತಕ ರಾಮ ಪ್ರಾಕೃತರಹಿತ
ಸಕಲ ಗುಣಪೂರ್ಣ ಗೋಪಾಲವಿಟ್ಠಲ
ಶ್ರೀಕೃಷ್ಣ ಉಡುಪಿನಿವಾಸ ಸಲಹೋ ನಮ್ಮ ॥ 2 ॥

॥ ರೂಪಕತಾಳ ॥

ದ್ವಾಪರವಲಿ ಅಂದು ಅವತರಿಸಿದ ಹರಿಯೆ
ಗೋಪಾಲರೊಡನಿನ್ನು ಆಡಿ ಆಕಳಕಾಯ್ದು
ಅಪ್ರಮೇಯ ಪೂರ್ಣ ಪೂರ್ಣ ಮಾಡಲಿಬೇಕು ಎಂತೆಂದು
ಈ ಪೃಥ್ವಿಯಲ್ಲಿ ಈ ಸ್ಥಳದಲ್ಲಿ ನಿಂತಿನ್ನು
ಗೋಪಾಲಕರೆ ಗೋವುಗಳ ಅಂದಾದವರ
ಸುಪರಮ ಸನ್ಯಾಸಿಗಳ ಮಾಡಿಸೃಷ್ಟಿಸಿ
ತಾ ಪೂಜೆ ಇವರಿಂದ ನಿರುತತೆಗೆದುಕೊಂಡು
ಶ್ರೀಪತಿ ಇವರಿಂದ ಸರ್ವಸಾಧನಗಳನ
ತಾ ಪಾಲಿಸುವ ಸಂಭಾಷ ಸಂದರಶನದಿ
ನಾ ಪ್ರತಿಕಾಣೆ ಈ ಕ್ಷೇತ್ರಕೆ ಮಿಗಿಲೊಂದು
ಶ್ರೀ ಪುರುಷೋತ್ತಮ ಉಡುಪಿನ ಸಿರಿಕೃಷ್ಣ
ಅಪಾರ ಮಹಿಮ ಗೋಪಾಲ ವಿಟ್ಠಲ
ಈ ಪರಿ ಇರುತಿಪ್ಪ ಇಲ್ಲಿ ಪಾಲಿಸುತ್ತ

॥ ಝಂಪೆತಾಳ ॥

ಅಣುಮೂರುತಿ ಇದೆ ಘನ ಮೂರುತಿ ಇದೆ
ಅಣುಘನ ಪರಿಪೂರ್ಣ ಮೂರುತಿ ಇದೆ
ವನಜ ಭವಾದಿಗಳ ಮನಕೆ ಧ್ಯೇಯವು ಇದೆ
ಸನಕಾದಿಗಳ ಮನಕೆ ಒಪ್ಪುವುದಿದೆ
ಅಣಿಮಾದಿ ಅಷ್ಟಾಂಗ ಯೋಗ ಸಾಧನವುಳ್ಳ
ಮುನಿಗಳ ಮನಕೆ ಪೊಳೆಯುತಲಿಹುದಿದೆ
ಕನಸು ಜಾಗ್ರತೆ ಸ್ವಪ್ನ ಸುಷುಪ್ತಿ ವ್ಯಾಪಾರ
ದಿನಗಳನು ನಡೆಸುವ ಮೂರ್ತಿ ಇದೆ
ಫಣಿ ಫಣದಲ್ಲಿ ನಾಟ್ಯವಾಡಿ ಭಕ್ತರಕಾಯ್ದ
ಮನುಜರೂಪವ ತಾಳ್ದ ಮೂರ್ತಿ ಇದೆ
ಜನನಿಗಾಟವ ತೋರಿ ಜನರ ತೋಷ ಬಡಿಸಿದ
ಘನ ಕರುಣಾಕರ ಮೂರ್ತಿ ಇದೆ
ವನದಿ ತೀರವಾಸ ಗೋಪಾಲವಿಠಲ
ಚಿನುಮಯ ಮೂರ್ತಿ ಸುಖ
ಮುನಿ ಮನ ಮಂದಿರವಾಸ ॥ 4 ॥

॥ ತ್ರಿಪುಟತಾಳ ॥

ಚಿತ್ತಜನಯ್ಯ ಕಾಣೊ ಚಿಂತನೆಗೆ
ಭಕ್ತವತ್ಸಲ ಕಾಣೊ ಅಭಿಮುಖಕೆ
ನಿತ್ಯವ್ಯಕ್ತನು ಕಾಣೊ ನಿರುಪಾಧಿಕರಿಗೆಲ್ಲ
ಸತ್ಯ ಅವ್ಯಕ್ತ ವಿಷಯಾಸಕ್ತರಿಗೆ
ಸತ್ಯರೂಪನು ಕಾಣೊ ಭೃತ್ಯಜನರಿಗಿನ್ನು
ಮೃತ್ಯುರೂಪನು ಕಾಣೊ ದೈತ್ಯಜನಕೆ
ಮತ್ತೆ ಮಧ್ಯಮರಿಗೆ ಮನುಜರೂಪದಿ ತೋರ್ಪ
ಮತ್ತಾಜಾರ ಸ್ತ್ರೀಯರಿಗೆ ಜಾರ
ಸುತ್ತ ಆಡಿದ ಗೋಪಾಲಕರಿಗೆ ಗೋವಳ
ತತ್ತದಾರಕವು ಒಂದರಲ್ಲೆ
ಪ್ರತ್ಯೇಕ ಅವರವರಿಷ್ಟರೂಪಕನಾಗಿ
ನಿತ್ಯ ತೋರುವ ನಿಲುಕ ಜೀವರಿಗೆ
ಮುಕ್ತಿದಾಯಕ ಕೃಷ್ಣ ಗೋಪಾಲ ವಿಠಲ
ಪ್ರತ್ಯಕ್ಷ ನೋಡಿಲ್ಲಿ ಬಲ್ಲವರಿಗೆ ॥ 5 ॥

॥ ಅಟ್ಟತಾಳ ॥

ಇದೇ ಶ್ವೇತದ್ವೀಪ ಇದೇ ಅನಂತಾಸನ
ಇದೇ ಶ್ರೀ ವೈಕುಂಠ ಇದೇ ಮುಕ್ತಭಾಗ
ಇದೇ ಮಧ್ವಸರೋವರ ವಿಧಿಯಿಂದ ಮಾಡಿದ್ದು
ವಿಧಿಕಾಣೊ ವಿರಜಾನದಿಯು ಸ್ನಾನಕೆ ಮುಂದೆ
ಪದುಮೆಯಿಂದರ್ಥಿಲಿ ಪೂಜಿತಮೂರ್ತಿದು
ವಿಧಿಯಿಂದ ನಿರ್ಮಿತವಾದ ಮೂರ್ತಿಯು ನೋಡಾ
ಅಧಿಕಧಿಕವಾಗ ಮೂರ್ತಿ ಅಪ್ರತಿ ಈ ಕ್ಷೇತ್ರ
ಬುಧರೇವೆ ಬಲ್ಲರು ವಿಧಿಸಿ ನೋಡಲು ಇನ್ನು
ಮದನನಯ್ಯ ಚಲ್ವಗೋಪಾಲವಿಠಲ
ಸದಾ ನಮ್ಮ ಸಲಹೊ ಉಡುಪಿ ಶ್ರೀಕೃಷ್ಣ ॥ 6 ॥

॥ ಆದಿತಾಳ ॥

ನಮೋ ನಮೋ ಪಾಂಡವ ಪಕ್ಷಪಾತಿಯೆ
ನಮೋ ನಮೋ ಅಗಣಿತ ಗುಣ ಗಣಾಂಬುಧೆ
ನಮೋ ನಮೋ ನಿರ್ದೋಷ ನಿಜ ಆನಂದ
ನಮೋ ನಮೋ ಪ್ರಾಕೃತಗಂಧ ವಿದೂರನೆ
ನಮೋ ನಮೋ ನಿತ್ಯ ನಿರಂಜನ ಪೂರ್ಣ
ನಮೋ ನಮೋ ಸ್ವಗತ ಭೇದ ವಿವರ್ಜಿತ
ನಮೋ ನಮೋ ಕಾರುಣ್ಯ ಕಾಪಟ್ಯರಹಿತ
ನಮೋ ನಮೋ ವಿದ್ಘನಾಕಾರ ಚೆಲುವ
ನಮೋ ನಮೋ ನಿತ್ಯತೃಪ್ತ ನಿರಾಶ್ರಯ
ನಮೋ ನಮೋ ಸಿರಿಅಬುಜಭವವಂದಿತ
ನಮೋ ನಮೋ ಸರ್ವಜೀವ ಜಡವ್ಯಾಪ್ತ
ನಮೋ ನಮೋ ಸೃಷ್ಟ್ಯಾದಿ ಅಷ್ಟಕರ್ತರಾಜ
ನಮೋ ನಮೋ ಸುರನದಿ ಜನಕ ಹೇ ತಾತ
ನಮೋ ನಮೋ ಗೋಪಾಲವಿಠಲ ಮೂರುತಿ
ನಮೋ ನಮೋ ಜಯ ಜಯ ಉಡುಪಿನ ಸಿರಿಕೃಷ್ಣ ॥ 7 ॥

॥ ಜತೆ ॥

ನೋಡಿದವನಲ್ಲ ನಾ ನಿನ್ನ ನಿಜರೂಪ
ನೋಡಿಸೋ ಕರುಣದಿ ಗೋಪಾಲವಿಠಲ ॥ 8 ॥

॥ 4 ॥

ರಾಗ : ಕಾಂಬೋಧಿ ॥ ಧ್ರುವತಾಳ ॥

ಎಲ್ಲೆ ವೈಬೋಗವಿದು ಎಲ್ಲಿ ವೈಭವವಿದು ।
ಎಲ್ಲೆ ಆನಂದವಿದು ಎಲ್ಲಿ ಅದ್ಭುತವಿದು ।
ಎಲ್ಲಿ ಸೌಭಾಗ್ಯವಿದು ಎಲ್ಲಿ ವಿಚಿತ್ರವಿದು ।
ಎಲ್ಲೆ ಐಶ್ವರ್ಯವಿದು ಎಲ್ಲಿ ನಾಟಕವಿದು ।
ಎಲ್ಲೆ ಅಪೋಷ್ಣವಿದು ಎಲ್ಲಿ ಪರಾಕುಇದು ।
ಎಲ್ಲಿ ಸ್ತೋತ್ರವಿದು ಎಲ್ಲಿ ಪರಿವಾರವಿದು ।
ಎಲ್ಲಿ ಪಾಲಗವಿದು ಎಲ್ಲೆಲ್ಲಿ ನೋಡಿದರು ।
ಇಲ್ಲವೊ ನಿನ್ನ ಸರಿಬಲ್ಲಿಪರಿಳೆಯೊಳು ।
ಸಲ್ಲುವದಿದು ಇಂದೆ ಅಲ್ಲದೆ ದ್ವಾರಾವತಿ–
ವಲ್ಲಭ ಗೋಕುಲವಲ್ಲಿ ನಿಂಪಾಡಿದಾಗ ।
ಗೊಲ್ಲರ ಮಕ್ಕಳೊಡನೆ ಕಳ್ಳತನಕೆ ಸರುವ–
ದಲ್ಲಿ ಸಂಚರಿಸಿದ್ದು ಎಲ್ಲ ದೇವರದೇವ ।
ಕಲ್ಲಿದಾಗರ ಪೆಗಲಲ್ಲಿ ಪೊತ್ತುಕೊಂಡು ।
ಬಳ್ಳಿ ಉಡಿಗೆ ಉಟ್ಟು ಗುಲ್ಲಿ ಮಾಡುವ ಚೀಲ ।
ಸೊಲ್ಲು ಸೊಲ್ಲಿಗೆ ಸುಳ್ಳು ಮಾತುಗಳಲ್ಲಿ ।
ನಿಲ್ಲಾ ದಿನಕಳದದ್ದೆಲ್ಲ ಎಲ್ಲಿ ಪೋಯಿತೋ ।
ಒಳ್ಳೆಯುಪನಾಗಿ ಉಡುಪಿಯುಲ್ಲಿ ನೆಲೆಸಿ ಅರ್ಥಿ–
ಯುಲ್ಲಿ ಯತಿಗಳಿಂದ ಸಲ್ಲಲಿತ ಸಂಪೂಜೆ ।
ಗೊಳ್ಳುತ ಮೆರೆವದು ಭಳಿರೆ ಹೊ ಹೊ ।
ಎಲ್ಲ ಉಪಾಯುವನ್ನು ಬಲ್ಲ ಬಲವಂತರೊಡೆಯು ।
ಬಲ್ಲವರಾರು ಗುಣವಲ್ಲಿಗಳು ನಿನ್ನವು
ಬೆಳ್ಳಿಗದ್ದುಗಿಪುರದಲ್ಲಿ ಇಪ್ಪ ವಿಜಯು
ವಿಠಲ ಉಡುಪಿ ಶ್ರೀಕೃಷ್ಣ ।
ವಳ್ಳಿಗೋವಳ ಹಟಿಯುಲ್ಲಿ ಮೆರೆದೆ ನೀನು ॥ ॥ 1

॥ ಮಟ್ಟತಾ

ನಾಕಜನರ ಸನಕಾದಿಗಳ ಶೌನಕಾದ್ಯರ ಮಾ–
ನಕೆ ತೋರದ ಕನಕಾಂಬರಧರ
ನಾ ಕಾಣೆನೊ ನಿನ್ನ ಕಪಟತನಕೆ ಎಲ್ಲೆಲ್ಲಿ ಪಿ–
ನಾಕಧರಾಪ್ತ ಜ್ಞಾನಕಾಯಾ ಸಿದ್ಧ ವಿಜಯುವಿಠಲ ಕೃಷ್ಣ
ನಾ ಕರಮುಗಿವೆ ಘನಕಾರದೇವ ॥

॥ ತ್ರಿವಡಿತಾಳೆ ॥

ಜಾರ ಚೋರನಾಗಿ ಜಗದೊಳು ಹೆಸರಾಗಿ ।
ನಾರೇರಮನ ಅಪಹಾರಗೈಸಿದೆ ಅಂದು ।
ಪೋರರ ಸಂಗಡ ಕೆಲದಾಡಿ ಕಂಡಲ್ಲಿ ।
ಹಾರ್‍ಯಾಡಿ ಹರಬಾರಿಂದಲಿ ಕೊಂಡಾಡಿ ।
ಊರ ಜನಕೆ ಎಲ್ಲ ತಲೆ ಹೊರೆಯಾಗಿ । ಸಂ-
ಸಾರವ ಕೊಂಡಿ ಎಲ್ಲೊ ಪರಸ್ತ್ರೀಯರ ।
ಆ ರಾಸಕ್ರೀಡೆಯಲ್ಲಿತ್ತೆ ಮತ್ತೆ ವನದೊಳೊಬ್ಬ ।
ನಾರಿಯು ಪೆಗಲಲಿ ನೀಚೋಟ್ಟೆ ನೋಡದೆ ।
ಸಾರಿ ಸಾರಿಗೆ ಎಂಜಲು ಮೆಲವುತ್ತ ।
ಈ ರೀತಿಯಲಿ ಇದ್ದೆ ಒಬ್ಬರಾದರು ನಿನ್ನ ।
ಆರಾಧನೆ ಮಾಡಿದವರಲ್ಲ ಕಾರುಣ್ಯ-
ಮೂರುತಿ ಉಡುಪಿಯ ಕೃಷ್ಣ ವಿ-
ಸ್ತಾರ ಮಹಿಮ ಸಿರಿ ವಿಜಯವಿಠ್ಠಲರೇಯ ॥ 3 ॥

॥ ಅಟ್ಟತಾಳ ॥

ತಲೆವುರಿ ನಮಗೆಂದು ನಂದಗೋಪ ಗೋಪಿ ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯ ।
ಗೆಳೆಯರಾಪ್ರಯೆಂದು ಗೋಪಮಕ್ಕಳು ಅಂದು ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯ ।
ಬಲು ನಾರಿಯರು ಕಾಮಾತುರದಿಂದ ತಿಳಿದು ।
ನಿನ್ನ ಪೂಜಿಸಲಿಲ್ಲವಯ್ಯಾ ॥
ಕುಲದಲ್ಲಿ ಪುಟ್ಟಿದನೆಂದು ಯಾದವರು ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ ।
ಇಳೆಯವಲ್ಲಭ ಉಗ್ರಸೇನನು ನಿನ್ನನಾ ।
ಕೆಳಗೆ ನಿಲ್ಲಿಸಿವಾಲಗ ಕೊಂಡನಯ್ಯಾ ।
ತಿಳಿದುಕೊ ನಿನಗಂದು ಒಬ್ಬರಾದರು ನಿ ।
ಶ್ಚಲ ಭಕುತಿಯಿಂದ ಭಜಿಸಲಿಲ್ಲ ।
ಎಲೊ ದೇವ ಉಡುಪಿನ ಕೃಷ್ಣ । ವಿಜಯ ವಿ-
ಠಲ ನಿನಗೀ ಪೂಜೆ ಎಲ್ಲಿಂದ ಒದಗಿತು ॥ 4 ॥

॥ ಆದಿತಾಳ ॥

ಇದ್ದರಿದ್ದರಾರಾದರು ಒಂದರೆ ಅರ್ಚಕರು ।
ಶುದ್ಧಯತಿಗಳಿಂದ ಪೂಜೆಗಳಂದು ।
ಇದ್ದಿಲ್ಲವೆಂಬೋದು ಲೋಕವೆ ಬಲ್ಲುದು ।
ಕದ್ದು ತಿಂವವಗೆ ಬಲು ಬಲು ಉಪಚಾರ ।
ಉದ್ದಿನ ಕಾಳಷ್ಟು ಕೊರತೆಯಾಗದಂತೆ ।
ಪದ್ಧತಿ ತಪ್ಪದೆ ಉದಯಾಸ್ತಮಾನತೆನಕ ।
ತಿದ್ದಿ ಮಾಡಿದ ವಸ್ತ್ರ ದಿವ್ಯವಸನರತುನ ।
ಗದ್ದುಗೆ ಮೇಲೆ ನಿಂದು ಮೇಲಾದ ಶಾಖಪಾಕ ।
ಮಿದ್ದು ಮಾಡಿದ ಭಕ್ಷ ಪರಮಾನ್ನ ಓದನ ।
ಮುದ್ದಾನ್ನ ಮಿಗಿಲಾದ ಷಡುರಸ ಪದಾರ್ಥ ।
ಮುದ್ದೆ ಮುದ್ದೆ ಕವಳ ತಪ್ಪದೆ ನಿರಂತರ ।
ಮೆದ್ದು ಮಂಗಳಾರತಿ ಬೆಳಗಿ ಒಪ್ಪಿ ।
ಪೊದ್ದುಕೊಂಡಿಪ್ಪ ಸುಖ ವಳ್ಳಿಯೊಳಗಿತ್ತೆ ।
ಹೆದ್ದವರತನ ಬಿಟ್ಟು ಚಿಕ್ಕಮಕ್ಕಳ ಕೈಯ್ಯ ।
ಗುದ್ದಿಸಿಕೊಂಡಿದ್ದು ಮರದಿಯೊ ಎಲೊದೇವ ।
ಬದ್ಧ ಕೃತಾಂಜಲಿ ಹಸ್ತದಿಂದಲಿ ನಿಂದು ।
ಶುದ್ಧ ಯತಿಗಳು ಭಯ ಭಕುತಿಯಿಂದ ।
ಎದ್ದು ಸರ್ವೋಗವಾಗಿ ತುತಿಸಿ ಕಾಲತ್ರಯಾ ।
ಸಿದ್ಧಾಂತದಲಿ ನಿನ್ನ ಬಜಿಸುವ ಲೇಸು ನೋಡು ।
ಗೆದ್ದಿಯೊ ಅಂದಿನ ಪಡಿ ಪಾಟಲು ।
ನಿದ್ರೆ ಕಾಣದೆ ಸ್ತ್ರೀಯರ ಕೂಡಲಿದ್ದುದು ।
ಬುದ್ಧಿವಂತರೊಡೆಯ ವಿಜಯವಿಠ್ಠಲಕೃಷ್ಣ ।
ಸಿದ್ಧಾರ್ಥ ಪಾಲಿಸುವ ಸಂತತ ನಿರ್ದೋಷ । ॥ 5 ॥

॥ ಜತೆ ॥

ಆವದಾದರು ನಿನಗೆ ವಿಹಿತವೆ ಸರಿ ಸರ್ವ
ದೇವೇಶ ವಿಜಯವಿಠಲ ಉಡುಪಿನ ಕೃಷ್ಣ ॥

ರಾಗ : ಸಾವೇರಿ ॥ 5 ॥ ॥ ಧ್ರುವತಾಳೆ ॥

ಅಂಗುಟಮಾತರವೆಂಬೊ ಮೂರುತಿ ಪರೀಕ್ಷಿಸಿತು ।
ಕಂಡು ಕಂಡರಸಿಕೊಂಬ ಕಮನೀಯ ಮೂರುತಿಯು ।
ಆತುಮಪುರುತಿ ಅಂತರಾತುಮ ಮೂರುತಿಯು ।
ಬಿಂಬ ಮೂರುತಿ ಜೀವದಾಕಾರ ಮೂರುತಿಯು ।
ಅಣೋರಣೀಯ ಎಂಬ ಚಿನುಮಯ ಮೂರುತಿಯು ।
ಮುನಿಗಳ ಮನದಲ್ಲಿ ಮಿನುಗುವ ಮೂರುತಿಯು ।
ಅಮರಾರಾಭರಣ ತಾನೆಲ್ಲಿಂದೆಲ್ಲಿಗೊದಗಿತೊ ।
ಬೊಮ್ಮಗಾದಾ ಮೂರುತಿ ತಾನೆಲ್ಲಿಂದೆಲ್ಲಿಗೊದಗಿತೊ ।
ಎನಗೆ ಪ್ರಸನ್ನನಾದ ಈ ಉಡುಪಿನ ಕೃಷ್ಣ ಮೂರುತಿ ।
ಪುರಂದರ ವಿಠಲನೂಲುಮೆ ಎಂತೊ ॥ ॥ 1 ॥

॥ ಮಟ್ಟತಾಳೆ ॥

ಮಂದಾರ ಮಲ್ಲಿಗೆ ತುರುಬಲಿ ಅಂಬರವನುಟ್ಟು ಗೋಪಿ ಗೋ–
ವಿಂದನಾಡಿದಾಟಗಳನು ಪ್ರಬಂಧ ಗೀತೆಗಳ ಮಾಡಿ ।
ಚಂದ ಚಂದದಲ್ಲಿ ಪಾಡಿದಳು ಮೊಸರು ಮಥನದಲ್ಲಿ ತನ್ನ ।
ಕಂದನ್ನ ಅದ್ವಿತೀಯ ಅಪ್ರಮೇಯನಾಗಮ್ಯಗೋಚರನೆಂದು
ನಂದ ವ್ರಜವೆತ್ತ ಉಡುಪಿನ ಕೃಷ್ಣನ ಮಹಿಮ ಎತ್ತಲೆಂದು ।
ವೃಂದಾರಕ ವಂದ್ಯ ಪುರಂದರ ವಿಠಲನೆಬಲ್ಲನೆನುತಿರ ।
ನಂದ ವ್ರಜವತ್ತ ಉಡುಪಿನ ಕೃಷ್ಣನ ಮಹಿಮೆ ಎತ್ತ ॥ 2 ॥

॥ ತ್ರಿಪಡೆ ॥

ಪೊಂಬಟ್ಟೆ ಪಾಲು ಮೊಸರಿಂದ ತೋದಿದೆ ।
ಕಂಬುಕಂಧರ ಕೆನ ಬೆಣ್ಣೆಯಲೊರೆದಿದೆ ।
ಅಂಬುಜನಾಭ ನೀ ಎಲ್ಲೆಲ್ಲಿ ತುಡುಕಿಂದೆ ।
ಎಂಬ ಗೋಪಿಗೆ ಕೃಷ್ಣ ಅಂಜುತಿರ್ದುದ ಕಂಡೆ ।
ಅಂಬುಜಭವ ಪಿತ ಈ ಉಡುಪಿನ ಕೃಷ್ಣ ।
ತಾ ಬಾಲಕನಾದ ಪುರಂದರ ವಿಠಲ ॥ ॥ 3 ॥

॥ ಆಟತಾಳ ॥

ದೇವ ತರುವು ನಮ್ಮೀ ದೇವ ಕೊಳಲನೂದೆ ।
ದೇವನಾರಿಯರುಟ್ಟ ದೇವಾಂಗ ದುಗುಲವ ।
ಆವ ಸುಸ್ವರವೋ ಆವ ಸುಜಾತಿಯೋ ।
ಆವ ಮೋಹನವೋ ಇದಾವ ಮೂರ್ಛನವಪ್ಪ ।
ದೇವ ಪುರಂದರ ವಿಠಲನಂಘ್ರಿಗಳನೆ ।
ಈ ಉಡುಪಿನ ಕೃಷ್ಣನಾದ ಮೂರುತಿ ತಪ್ಪಾ ॥ 4 ॥

॥ ಆದಿ ॥

ಒಂದು ಕೈಯಲಿ ಕಡಗೋಲು ಮ-
ತ್ತೊಂದು ಕೈಯಲಿ ಕಡೆವ ನೇಣು ।
ನಿಂದು ತಾಯಿಯ ಮೊಗವ ನೋಡಿ ।
ಚಂದದಿ ಕುಣಿ ಕುಣಿದಾಡಿದ ಧಿಂ ಧಿಂ ಧಿಂ
ಧಿಂ ಧಿತ ಮುದ್ದು ಪುರಂದರ ವಿಠಲ ।
ಉಡುಪಿಯ ಕೃಷ್ಣ
ನಿಂದು ತಾಯಿ ಮೊಗನೋಡಿ ॥

॥ ಜತೆ ॥

ಉಡುಪಿನ ಸಿರಿಕೃಷ್ಣ ಪುರಂದರ ವಿಠಲ
ಬಿಡೆನೊ ಬಿಡೆನೊ ನಮ್ಮ ಮಧ್ವ ಮುನಿಯಸ್ವಾಮಿ

॥ 6 ॥

ರಾಗ . ಸೌರಾಷ್ಟ್ರ ॥ ಧ್ರುವತಾಳ ॥

ಗೊಲ್ಲರ ಗ್ರಾಮವ ಬಿಟ್ಟು ಇಲ್ಲಿಗ್ಯಾಕ ಬಂದ್ಯೊ ಸಿರಿ
ನಲ್ಲ ಉಡುಪಿನ ಕೃಷ್ಣ ಫುಲ್ಲನಾಭ ಭವಾದ್ರಿರೊಡೆಯಾ
ಎಲ್ಲ ಜೀವರ ನಿಯಾಮಕ ಬಲ್ಲಿದ ರಾಕ್ಷಸರ ಮಾರಕ
ಇಲ್ಲಿಗೆ ನೀ ಬಂದ ಬಗೆನೊಲ್ಲು ಪೇಳೋ ಸ್ವರ್ಣವರ್ಣ
ಕೊಲ್ಲುವ ರಾಕ್ಷಸರೆಲ್ಲ ನಲ್ಲದ ಮಾತುಗಳಾಡಿ
ಇಲ್ಲದ ನಿಂದ್ಯವ ಹೊರಿಸಿ ಕಳ್ಳನೆಂಬೋ ಪ್ರಿಯರೆಲ್ಲ
ಗೊಲ್ಲ ಜನರೆಲ್ಲರೆನಗೆ ಹೊಲ್ಲೆ ಮಾತಾಡುವರೆಂದು
ಇಲ್ಲಿಗೆ ನೀ ಬಂದ್ಯಾ ಮಧ್ವವಲ್ಲಭ ಉಡುಪಿನ ಕೃಷ್ಣಯ್ಯ
ಇಲ್ಲಿಪ್ಪ ಯತಿಗಳೆಲ್ಲ ಎಲ್ಲಕಾಲ ಶುಭಗುಣವುಳ್ಳ ಸಜ್ಜನರು ಎಂದು

ಪುಲ್ಲನಾಭನೆ ಬಂದ್ಯೋ ಹೇಗೋ
ಅಲ್ಲಿ ಅವತಾರ ಮಾಡಿ ಎಲ್ಲ ಬಗೆಯಲ್ಲಿ ದಣಿದು
ಇಲ್ಲಿ ಮಧ್ವಮುನಿ ಬಲು ಒಳ್ಳೇರೆಂದು ನೀನು ಬಂದ್ಯೋ
ದುರ್ಲಭ ತಪ ಸಂದರುಶನ ಎಲ್ಲ ಸಜ್ಜನರಿಗೆಂದು
ಇಲ್ಲಿ ಬಂದ್ಯೊ ರಾಮಚಂದ್ರ ವಿಠಲ ಉಡುಪಿನ ಕೃಷ್ಣ ॥ 1 ॥

॥ ಮಟ್ಟತಾಳ ॥

ಹತ್ತಾವತಾನವನು ಶರಣರು ಮಾಡಿನೆ
ನಿತ್ಯವಾಗಿ ಒಂದು ಸುಖ ತೋರಿಸಿ ಅವರು
ಭಕ್ತಿಯಿಂದಲ್ಲಿ ಒಮ್ಮೆ ಪೂಜಿಸಲಿಲ್ಲೆಂದು
ಹತ್ತು ಪ್ರಮತಿಗಳ ಚಿತ್ತಕ್ಕೆ ಒಲಿದರೆ
ಉತ್ತಮ ಪೂಜೆಯನು ಮಾಡುವರು ಎಂದು
ಉತ್ತಮೋತ್ತಮ ನೀನು ಬಂದ ಬಗೆ ಹೇಗೊ
ಸತ್ಯಸಂಕಲ್ಪ ರಾಮಚಂದ್ರ ವಿಠಲ
ತತ್ವಳಗೊಳಿಸಿದರೆ ಉತ್ತರ ತಿಳಿಸುವುದು ॥ 2 ॥

॥ ರೂಪಕತಾಳ ॥

ಹೆಚ್ಚಿನಾ ಮಗನಾಗಿ ಮತ್ಸ್ಯರೂಪವ ಧರಿಸಿ
ಅಚ್ಚ ವೇದವ ತಂದು ಅಚ್ಯುತ ನೀಕೊಟ್ಟೆ
ಸಚ್ಚಿದಾನಂದಾತ್ಮ ನಿಚ್ಚ ನಿನ್ನನು ಜಲದಿ
ಬಚ್ಚಿಟ್ಟನಲ್ಲದೆ ಮೆಚ್ಚಿಸಿದ ಬಗೆ ಏನೊ
ಇಚ್ಛೆಯಿಂದಲಿ ನೀನು ಶ್ರುತಿ ಸ್ಮೃತಿ ನಿರ್ಮಿಸಿ
ಬಚ್ಚಿಟ್ಟ ಭಾವಾರ್ಥ ಸುಖಮುನಿ ಹೊರದೆಗೆದ
ಅರ್ಚಿಸುವರೆನಗೆಂದು ಇಲ್ಲಿಗೆ ಬಂದ್ಯೇನೊ
ನೆಚ್ಚಿದ ಜನರಿಗಭೀಷ್ಟ ಕೊಡಲಿ ಬಂದ್ಯೊ
ಸುಚ್ಚರಿತ ರಾಮಚಂದ್ರವಿಠಲ ಕೃಷ್ಣ ॥ 3 ॥

॥ ಝಂಪೆತಾಳ ॥

ಸುರರಿಗಾಗಿ ಶರಧಿ ಮಥಿಸಿ ಅಮೃತವ ತೆಗೆದೆ
ಗಿರಿಯ ಹೊರಿಸಿದರು ತವ ಬೆನ್ನಲಿ
ಧರಣಿ ಭಯ ಪರಿಹರಿಸಿ ಹಿರಣ್ಯಾಕ್ಷನ ಕೊಂದೆ
ಧರೆ ನಿನ್ನ ಮುಖವರ ಹಮುಖದಂದದಿ
ಇರುವಂತೆ ಮಾಡಿದಳು ಪೂಜಿಸಿದ ಬಗೆ ಏನು
ತರಳನಿಗಾಗಿ ಕಂಬದಿಂದ ಬಂದೆ
ಇರುಳು ಹಗಲು ಬಾಯಿತೆರದಿಪ್ಪ ತೆರಮಾಡಿ
ಕೊರಳಲ್ಲಿ ಪಿತನ ಕರುಳಿನ ಹೊರಿಸಿದ
ಸುರಪ ನಿನ್ನ ರೂಪ ತೆರೆದು ಮಾಡಿದ ದ್ವಿಜರು
ಧರೆಗೊಂಡು ನಿನ್ನ ಶರಧಿಗೆ ದೊಬ್ಬರೆ (?) ತುರುಗ
ಪುತ್ರಕಾಮೇಷ್ಟಿ ಯಜ್ಞವ ಮಾಡೆ
ಸಂಭ್ರಮವ ಬೇಕೆಂಬೊ ಅಪೇಕ್ಷೆ ಇಂದ
ಎರಡೈದು ರಥರಾಯ ಸೃಷ್ಟಿಗಳ ಸಂತುಷ್ಟಿ
ಪರಂಪರಿ ಮಾಡೆ ನೀ ಪುತ್ರನಾದೆ
ತರುಣಿ ಮಾತನು ಕೇಳಿ ನಿನ್ನ ಅರಣ್ಯಕೆ
ಹೊರಡಿಸಿದನಲ್ಲದಲೆ ಅರ್ಚಿಸಿದನೆ
ತರಗಿನೆಲೆಯ ಮೆದ್ದು ತಪಸಿದ್ದು ಪಡೆದರು
ಪರಮನೆ ನೇರಿಸಿದ ವಸುದೇವನು
ಹರನು ಉತ್ತಮನೆಂದು ಒಲಿವೆನೆಂದರೆ ದಿಗಂ
ಬರನ ಮಾಡಿದ ನಿನ್ನ ಮಗನ ವೈರಿ
ತುರಗನೇರಿ ಬರಲೊಬ್ಬರೆದಿರು ನಿಂದಿರನೆಂದು
ಶರಣವತ್ಸಲ ಕಡೆಗೋಲು ನೇಣು
ಕರದಿ ಪಿಡಿದುಕೊಂಡು ತುರಿಯಾಶ್ರಮದವರು
ಸುರರು ಸಮರೆಂದು ನೀ ಒಲಿದು ಬಂದ
ನಿರುತ ನವವಿಧ ಪರಿಪರಿ ಬಗೆಯ ವೇಷ
ಧರಿಸಿ ಭಕ್ತಿಯಲ್ಲಿ ಮಾಡುವರು ಎಂದು
ನಿರುಮಲ ಶುಭಕಾಯ ರಾಮಚಂದ್ರವಿಠಲ
ಸಿರಿಕೃಷ್ಣ ಉಡುಪಿಗೆ ನೀನು ಬಂದ್ಯೊ ॥ 4 ॥

॥ ತ್ರಿವಿಡಿತಾಳ ॥

ಸ್ನಾನಮಾಡಿ ನಿನಗೊಂದಿಸುವರಿಲ್ಲಿ
ಗಾನಮಾಡಿ ನಿನಗೊಂದಿಸುವರಿಲ್ಲಿ

ವಾಣಿಯರಸನ ಜನಕ ಮೌನವಮಾಡಿಸಿ
ನಿನಗೊಂದಿಸುವರಿಲ್ಲಿ ಜ್ಞಾನಲೋಲರಾಗಿ ನಿನಗೊಂದಿಸುವರಿಲ್ಲಿ
ಪ್ರಾಣದೊಲ್ಲಭನೆ ನೀ ಸರ್ವರಪ್ರಿಯನೆಂದು
ಮೇಣು ಭಕುತಿಯಲ್ಲಿ ನಿನಗೊಂದಿಸುವರಿಲ್ಲಿ ಜೀ
ವನದೊಡೆಯ ರಾಮಚಂದ್ರವಿಠಲ ಕೃಷ್ಣ
ಮೌನಿಗಳ ಏಕಾಂತ ಮನಸಿಗೊಲಿದು ಬಂದ್ಯೋ ॥ 5 ॥

॥ ಅಟ್ಟತಾಳ ॥

ಮೊಸರು ಹಾಲು ಕೊಡದ ಕಾರಣ ನೀನು
ನಿಶೆಯ ವೇಳ್ಯದಲಿ ಕದ್ದುಂಡನೆ ವಶವಿೀರಿ ಇವ ನಮ್ಮ
ಹಸಗೆಡಿಸುವನೆಂದು ಶಶಿಮುಖಿಯರು ಯಶೋದೆ ಮುಂದೆ
ವಸನ ಸೆಳೆದು ಬಿಗಿದಪ್ಪುವನೆಂಬಂತೆ
ಹುಸಿ ಮಾತುಗಳು ಪೇಳ್ವರೆಂದು
ಶಶಿಕೋಟಿತೇಜ ನೀ ರಜತಪೀಠಪುರಕೆ
ದಶಪ್ರಮತಿಗಳು ಶುದ್ಧಾತ್ಮರೆಂದು
ಹಸನಾದ ಪದ್ಧತಿಲರ್ಚಿಪ ಬಗೆ
ಅಂಶ ಅಂಶವಲ್ಲಿ ಪುರಾರಿಗೆ ತಿಳಿಸೊರೆಂದು
ಕುಶಲಪದ್ಧತಿ ಸ್ಮರಣೆಯುಕ್ತವಾಗಿ ನಿತ್ಯ
ಹೊಸ ಹೊಸ ಬಗೆ ಪೂಜೆ ಮಾಳ್ಪರೆಂದು
ಬಿಸಜಾಕ್ಷ ರಾಮಚಂದ್ರ ವಿಠಲ ಉಡುಪಿನ ಕೃಷ್ಣ
ಹೊಸ ಹೊಸ ಯತಿಗಳ ಮಾತಿಗೊಲಿದು ಬಂದ್ಯೋ

॥ ತ್ರಿವಿಡಿತಾಳ ॥

ಅರ್ಚಿಸಿದವರೆಲ್ಲ ಪದವಿ ಬೇಡುವರೆಂದು
ಇಚ್ಛೆವುಳ್ಳ ಯತಿಗಳಿವರಲ್ಲವೆಂದು ಬಂದ್ಯೊ
ದುಶ್ಚಿತ್ತಹರ ರಾಮಚಂದ್ರವಿಠಲ ಉಡುಪಿನ ಕೃಷ್ಣ
ಪಚ್ಚಾದಿ ನವರತ್ನದರ್ಚನಗೊಲಿದು ಬಂದ್ಯೊ

॥ ಝಂಪೆತಾಳ ॥

ಸರಸಿಜಸಂಭವಗೆ ಸತ್ಯಲೋಕವ ಕೊಟ್ಟು
ಹರಗೆ ಜನೋಲೋಕಾದಿ ಪದವಿಯಿತ್ತು
ಸುರಪಗೆ ಸ್ವರ್ಗಲೋಕವ ಕೊಟ್ಟು ಅಲ್ಲಿರಲು
ಗರುವ ತಾಳಿ ಉರುಆರಿಗಳ ಬಾಧಿಸ
ಮೊರೆ ಇಡುವರ ಭಯವ ಪರಿಹರಿಸಿ ಸಲಹೆಂದು
ಬರಲಿಲ್ಲ ಇವರು ನಿಷ್ಕೃಷ್ಟರೆಂದು
ಪರಮ ವೈಕುಂಠ ಸಮವಾದ ಸ್ಥಳವಿದು ಎಂದು
ಭರದಿ ಬಂದ್ಯೊ ರಾಮಚಂದ್ರವಿಠಲ ಕೃಷ್ಣ ॥ 8 ॥

॥ ಆದಿತಾಳ ॥

ಧರೆ ಇದು ಎಂಬೆನೆ ದ್ವಿಜರಿಗಿತ್ತ ಸ್ಥಳದಲಿಲ್ಲ
ಶರಧಿ ಎಂದೆಂಬೆನೆ ಶರಧಿಯು ಉದಕವಿಲ್ಲ
ವಿರಜಾನದಿಯೆ ಮಧ್ವಸರೋವರ ನಿಶ್ಚಯು
ಪರಮ ಉತ್ತಮಸ್ಥಾನ ರಜತಪೀಠಪುರ ವೈಕುಂಠ
ತುರಿಯಾಶ್ರಮದವರೇ ಸಿರಿ ಮಧ್ವೇಶ್ವರ
ಪರಿವಾರ ಜನರೆಲ್ಲ ಸುರರು ಸಮ ನಿಜ
ಶರಣವತ್ಸಲ ರಾಮಚಂದ್ರವಿಠಲ ಕೃಷ್ಣ ॥ 9 ॥

॥ ಜತೆ ॥

ಉಡುಪಿಯಾತ್ರೆಗೆ ಬಂದು ಆಡಿ ಇಡೆ ಪುಣ್ಯಪುರುಷ
ಬಿಡದೆ ಭಜಿಪರ ಪುಣ್ಯರಾಮಚಂದ್ರವಿಠಲ ಕೃಷ್ಣ ॥

॥ 7 ॥

ರಾಗ : ಶಂಕರಾಭರಣ ॥ ಧ್ರುವತಾಳ ॥

ತಳಿರಂತೆ ಹೆಜ್ಜೆ ಹೆಜ್ಜೆಗೆ ಚರಣ
ತಳಿಗಳು ಥಳಥಳಿಸುವ ಚೆಳ್ಳುಗುರು
ನೆಳೆಸಡು ಬಳುಕಲು ತೊಡೆ ಡಂಘಣಿಂವೊಂಬ
ಉಡಿಘಂಟಿ ಕಟ್ಟಿದ ಕಟಿಸೂತ್ರದುಕೂಲ

ನಳಿನಳಿನುವಾ ತೋಳುನಗೆಮೊಗದ ಬೆಂಬಳಗಾಗುತ
ಬರುತ ಸುಳಿಗರುಳರಳಲೆ ಮಾಗಾಯುಗಳೊಳು ನಲಿವುತ್ತ
ಗೋಕುಲದಲ್ಲಿ ಸುಳಿವವರದಕೇಶವ
ಗೋವಳವಮೂರುತಿ ಉಡುಪಿಲಡಗಿದನಿದಕೊ ॥ 1 ॥

॥ ಮಟ್ಟತಾಳ ॥

ಬಡವರ ನಿಧಿಯೋ ಭಾಗವತರ ಭಾಗ್ಯವೊ
ಮಡದಿಯುರುಉಹೋ ಮಹಾಸತಿಯು ಸಂಭ್ರಮವೋ
ಒಡಲವಿಡಿದು ಪ್ರತ್ಯಕ್ಷವೋ ಲಾವಣ್ಯದ ತೊಡುವೋ
ಆನಂದದ ಮಡಪೋ ಮೇಣು ಪೊಡವಿಸತಿಗೆ ಪತಿ ವರದ
ಕೇಶವ ಮೂರುತಿ ಕಡಲ ಕಡಿಯುಲುಡುಪಿಲಡಗಿದ ನೋಡ್ಯೆ ॥ 2 ॥

॥ ರೂಪತಾಳ ॥

ಗಡಣದ ಗೋಪಾಲರನುವಂಚಿಸಿ ಬೆಂ
ಬಿಡದೆ ಬಾಹ ಗೋಪಿಯರ ಮರೆಯಿಸಿ
ತಡವಿವ ತುರುವಿಂಡುಗಳ ತಪ್ಪಿಸಿ
ತನ್ನಪಟ್ಟು ಬಲದೇವನ ಬಿಟ್ಟು
ಪಡುಗಡಲತಡಿಯುಲುಡುಪಿಯುಲಡಗಿದರೆ
ನಿನ್ನನು ಬಿಡೆಬಿಡೆ ವರದಕೇಶವ ಕೃಷ್ಣಾ ॥ 3 ॥

॥ ಅವತಾರ ॥

ಕಡೆವ ಮಂಥನವ ಪಿಡಿದು ಕೆನೆವಾಲನು ಕುಡಿವ
ಚಿಕ್ಕ ಮಕ್ಕಳ ಬಡಿವ ಕಡ ಧೂರ್ತನು
ನಿನ್ನ ಮಗನೆಂದು ನಂದನ ಮಡದಿಗೊಲ್ಲ
ಸತಿಯರು ದೂರೆ ಆಕೆ ಕೊಲುವಳೆಂದು
ಉಡುಪಿನೊಳಡಗಿದರೆ ನಿನ್ನ ಪಿಡಿದರೆ
ವರದಕೇಶವ ಕೃಷ್ಣ ಆಕೆ ಬಡಿವಳೆಂದು

॥ ಏಕತಾಳ ॥

ಮುಡಿಗೆ ಸುತ್ತಿದ ಕತ್ತರವಿಲಿ ಕೈಯಲಿ
ಹಿಡಿದ ದಾಟು ಗೋವಳಗೋಲು ಉಡಿಯು ಗೋಲಿಯು ಚೀಲ
ಪೆಗಲಡಿಯು ಕಲ್ಲಿಯು ಕಂಬಳಿಯು
(ಉಡ್ಡಿಯು ಗೋಲಿಯು ಚೀಲ)
ನಡೆತಂದನು ತುರುಗಾವ ಲೀಲೆಯಿಂದ
ಉಡುಪಿನ ವರದಕೇಶವ ಕೃಷ್ಣ ॥ 5 ॥

॥ ಜತೆ ॥

ಬಿಡೆನಿನ್ನ ದಾಸ್ಯದ ಪರಮಪದವಿಯನು
ಬಿಡೆ ಬಿಡೆವರದಕೇಶವ ಕೃಷ್ಣಾ
ಬಿಡೆ ನಿನ್ನ ದಾಸ್ಯದ ಪರಮ ಪದವಿಯಾ ॥ 6 ॥

॥ 8 ॥

ರಾಗ ಭೈರವಿ ॥ ಧ್ರುವತಾಳ ॥

ದಯಮಾಡದಿರುವರೆ ದಯಾಳುಗಳಿಗರಸ
ಭಯ ಪರಿಹರಿಸೊ ಸಂಸಾರವೆಂಬೋ
ಹಯವದನನೆ ಭಕುತರ ಭಾರವಹಿಸುವ
ಜಯವಂತ ನೀನೆಂದು ಶೃತಿ ಸಾರಲು ಚಿ
ನ್ಮಯನ ಪೊರೆಯದೆ ಮರೆವದೊಳಿತೆ ಸ್ವಾಮಿ
ದಯವಂತ ಶಿರೋಮಣಿ ರಾಮಚಂದ್ರವಿಠ್ಠಲ ॥ 1 ॥

॥ ಮಟ್ಟತಾಳ ॥

ಬಡವ ಸುಧಾಮನ್ನ ಕಡು ಭಕುತಿಗೆ ಮೆಚ್ಚಿ
ಪಿಡಿತುಂಬ ಅವಲಕ್ಕಿ ಪೊಡವಿಗೊಡೆಯ ಕೊಂಡು
ಕಡಲಶಯನ ಭಕ್ತ ನೋಡಲಾ ಬಯಕೆ ತಿಳಿದು
ಕೆಡದ ಪದವಿಯನಿತ್ತು ಬಿಡದೆ ಪೊರದೆ ದೇವಾ

ಕಡು ಕೃಪೆಯಲಿ ಎನ್ನ ನುಡಿಯಾಲಿಸಿ ಬವದ
ಕಡಲ ದಾಟಿಸಿ ಆಚೆ ದಡವ ತೋರಿಸಬೇಕು
ಒಡೆಯ ರಾಮಚಂದ್ರವಿಠ್ಠಲ ನಿನ್ನ
ಅಡಿ ಸಾರುವುದಕ್ಕೆ ದೃಢ ಮನವಿರಬೇಕು

( ತ್ರಿವಿಡಿತಾಳ )

ಒಡೆಯನುಳ್ಳವರಿಗೆ ಪಡಿಯು ಚಿಂತಿಯು ಸಲ್ಲಾ
ದೃಢ ಭಕುತರ ಸುಖ ಬಡಿಸುವನೆ
ಜಡ ಜಂಗಮ ವ್ಯಾಪಾರ ಲೋಕರಕ್ಷಕ ನೀನು
ತಡಿಯದೆ ಎನ್ನ ಪಾಲಿಸಬಹುದೋ
ಅಡಿಗಡಿಗೆ ನೀನೆ ಪರಮನೆಂದವರ ಕರ
ಬಿಡಲು ನಿನಗೆ ಕೀರ್ತಿ ಸಲ್ಲುವದೆ
ಪೊಡವಿಸುರರ ಪೂಜೆ ಮಾಡುವಂದ ಬಾಗ್ಯ
ಕೊಡಬೇಕೋ ಸ್ಥಿರವಾಗೆ ಮಾರಮಣಾ
ಉಡುಪಿಯ ಕೃಷ್ಣ ರಾಮಚಂದ್ರವಿಠಲ
ಕಡಗೋಲು ನೇಣುಪಿಡಿದು ಬಂದನ ॥ 3 ॥

॥ ಅಟ್ಟತಾಳ ॥

ಎಂದೆಂದು ನೀ ಎನ್ನ ಪಾಲಿಸುವನೆಂದು
ಕಂದರ್ಪಪಿತ ನಿನಗುಸುರಿದೆನೊ
ಸಿಂಧುಶಯನ ರಾಮಚಂದ್ರವಿಠ್ಠಲ ನಿನ್ನ
ಪೊಂದಿದವರ ಪೂಜೆ ಮಾಡಿಸೆಂದು ॥ 4 ॥

॥ ಆದಿತಾಳ ॥

ಭಕುತರಿಗಾಗಿ ಗಳಿಸುವೆ ಭಕುತರಿಗಾಗಿ ಚಿತ್ತೈಸುವೆ (?)
ಶಕುತ ರಾಮಚಂದ್ರವಿಠ್ಠಲ ಲಕುಮಿಪತಿ ಪಾಲಿಸಬೇಕು ॥ 5 ॥

॥ ಜತೆ ॥

ನರಮನುಜರಿಗೆನ್ನ ವದನ ತೋರಿಸಬೇಡ
ಸಿರಿಯಾರಸ ರಾಮಚಂದ್ರವಿಠ್ಠಲರೇಯಾ ॥

ರಾಗ : ಕಲ್ಯಾಣಿ || 9 || || ಝಂಪೆತಾಳ ||

ಬದುಕಿದೆನು ಬದುಕಿದೆನು ಬಲು ಜನ್ಮದ ಪುಣ್ಯ
ಒದಗಿತೆನಗಿಂದು ಗುರುಗಳದಯದಿಂದ
ಸದಮಲನಾನಾದೆ ಸತತಮಾಡಿದ ದುರಿತ
ಉದಧಿಬತ್ತಿತು ಕಲ್ಪಾದಿಗಳು ನೋಡಿ
ಎದೆ ಒಡೆದು ಎತ್ತ ಪೋಗುವದೆಂದು ಯೋಚಿಸಿ
ಗದ ಗದನೆ ನಡುಗಿ ಭಯವೆ ಪೊಂದಿಪ್ಪರು
ತ್ರಿದಶರೆಲ್ಲರು ನೆರೆದು ತಮ್ಮ ತಮ್ಮೊಳು ಕುಣಿದಾಡಿ ।
ಪದೋಪದಿಗೆ ಮಹೋತ್ಸಹದಲ್ಲಿಪ್ಪರು
ಇದೆ ಸತ್ಯ ಎನ್ನ ನೂರೆಂಟು ಕುಲಗೋತ್ರಜರು
ಮುದದಿಂದ ಗತಿಗಭಿಮೊಗವಾದರು
ಬೆದರಲ್ಯಾತಕೆ ಇನ್ನು ಮುಂದಿನ ಜನನಕ್ಕೆ ?
ಯದುಕುಲೇಶನ ದಿವ್ಯ ಪಾದಗಳೆಂಬೊ ।
ನಿಧಿಯು ದೊರಕಿದಮೇಲೆ ಅವನಾದರು ಪೋಗಿ
ಉದರಕ್ಕೆ ಎಂಜಲೆಲೆ ಶೋಧಿಸುವನೆ ।
ಹದುಳದೆ ಸರಿ ಇಲ್ಲಿ ಲೇಶ ಕ್ಲೋಶವು ಇಲ್ಲ
ಎದುರಿಲ್ಲ ಉಡುಪಿನ ಶ್ರೀ ಯಾತ್ರೆಗೆ ।
ಪದವಿಯಲ್ಲಿ ಇದ್ದ ಸುಖಕಿಂತ ಇಲ್ಲಿಯು ಸುಖ ।
ಅಧಿಕವಾಗಿದೆ ನೋಡು ಎಲೆ ಮನವೆ
ಹೃದಯಾಂಬರ ನಿವಾಸ ವಿಜಯವಿಠಲ ಕೃಷ್ಣನ ।
ಪದಗಳ ನಂಬಿದ ವಿದುರನ ಭಾಗ್ಯ ನೋಡು || 1 ||

|| ಮಠ್ಯತಾಳ ||

ಹರಿದಾಸರ ಸಂಗ ಹರಿಕಥಾ ಪ್ರಸಂಗ
ಹರಿನಾಮಾಮೃತ ಹರಿಯು ಪಾಡಿದ ಗೀತ ।
ಹರಿಯು ಮನನ ಧ್ಯಾನ ಹರಿಯು ಸಂದರುಶನ ।
ಹರಿಸ್ತುತಿ ವಂದನೆ ಹರಿಯು ಪಾದಾರ್ಚನೆ
ಹರಿ ಪಾದೋದಕ ಹರಿಗುಣಿಸಿದ ಶಾಖ
ಪರಿಪರಿ ಓದನ ಅಪರಿಮಿತ ಸಾಧನ
ಧರೆಯೊಳಗಿಲ್ಲದಾಶ್ಚರ್ಯವ ಇಂದಿಲ್ಲಿ
ನಿರೀಕ್ಷಿಸಿದೆ ಎನಗೆ ದೊರಕಿತು ಬಲುಲಾಭ ।

ಪರಮ ಪುರುಷ ಕೃಷ್ಣ ವಿಜಯವಿಠಲ ಹರಿಯ ।
ಕರುಣದಳತೆಯ ಅರಿತವರಾರಯ್ಯ ॥ 2 ॥

॥ ತ್ರಿವಿಡಿತಾಳ ॥

ದುರನ್ನ ದುಷ್ಟಪರಿಗ್ರಹ ದುಸ್ಸಂಗ ದುರಾಚಾರ ।
ದುರವಾಕ್ಯ ದುಶ್ಚಿತ್ತ ದುರಾಸೆಯು ನಿರುತ ಬಿಡದೆ ಆ–
ಚರಿಸಿದ ಮನುಜಂಗೆ ಸುರರು ನೇಮಿಪಯಾತ್ರೆ
ದೊರೆತದೇನು ಮನವೆ ಹಿರಿದು ಜನ್ಮದಿ ನಮ್ಮ
ಹಿರಿಯರು ಪುಣ್ಯವಂತರು ಕಾಣೊ ಇದನೆಲ್ಲ
ಹರಿ ಬಲ್ಲನೊ ಬರಿದಾಗದು ಮತ್ತೆ
ಗುರುಗಳ ಕೃಪೆ ವಿಸ್ತರವಾಗಿದಿದಕಿದೆ ಗುರುತುಕಣೋ
ಸುರಗಂಗೆ ಮೊದಲಾದ ಸರಿತು ನೇತು ಎಲ್ಲ
ತಿರುಗಿದ ಫಲಂಗಳ ಮರುತದೇವನಿಂದ
ಹರಿತಾನೆ ಕೈಗೊಂಡು ಕರುಣಿಸಲದರಿಂದ
ಮೆರೆವ ವೈಕುಂಠಕ್ಕೆ ಸರಿಯಾದಜಾರಣ್ಯ–
ಪುರದ್ಯಾತ್ರೆ ಫಲಿಸಿತೋ ಭರದಿಂದ ದಾಸರ
ಪೊರೆವ ಪುರುಷೋತ್ತಮ ಸರಸದಿಲ್ಲಿ
ಇರಳು ಹಗಲು ಇಪ್ಪ ಉಡುಪಿಕೃಷ್ಣನ್ನ
ಸ್ಮರಣೆ ಮಾಡಿದ ಪುಣ್ಯಕ್ಕೆ ಸರಿಯಾವುದೂ
ದುರುಳರಿಗತಿ ದೂರ ವಿಜಯ ವಿಠ್ಠಲರೇಯ
ಎರವು ಮಾಡದೆ ಕಾವ ಕರದು ಕಳೆವ ನೋವ ॥ 3 ॥

॥ ಅಟ್ಟತಾಳ ॥

ನಿರ್ಮಾಲ್ಯ ವಿಸರ್ಜನೆ ಬೆಳಗಿನ ಪೂಜೆ
ಪರಮ ಪಂಚಾಮೃತ ಉದ್ವಾರ್ಚನೆ ಪೂಜೆ
ಶರತ್ಕಾಲ ಚಂದ್ರನ ಸೋಲಿಪ ಬೆಣ್ಣೆ ಸಕ್ಕರೆ ನೈವೇದ್ಯ
ಸುಂದರ ತೀರ್ಥಪೂಜೆ ವಿಚಿತ್ರಾಲಂಕಾರವ ।
ಸರಪೂಜೆ ಮಹಪೂಜೆ ಮಹಾಪೂಜೆ ಈ ಬಗೆ ನವವಿಧ ।
ಮರುತವತಾರ ಮಧ್ವ ಮುನಿಗಳಂದು ।
ವಿರಚಿಸಿ ಪೂಜೆ ಮಾಡಿದ ಸಂಭ್ರಮವೋ ।
ವರ ಸತ್ವ ಸ್ಥಳವಿದು ಭಕುತಿಯಿಂದಲಿ ಬಂದು ।

ಎರಗಿ ಒಂದೇನಾರಿ ಕೊಂಡಾಡಿ ಕೊಂಡಾಡಿ ತ್ಯೆಣ ಮಾ
ತುರದಿಂದ ಯತಿಗಳ ಕರದಿಂದಾರಾಧನೆ ।
ಪರುಷದಿಂದಲಿನೋಡೆ ಮುಂದೆ ಆ ಮನುಜನು ।
ದುರಿತಕ್ಕೆ ಬೀಳನು ಹರಿ ಕಾವುತಲಿಪ್ಪ
ನಿರಯುದೂರನು ಪ್ರಣ್ಯ ತೊಲಗದೆ ಇಹನು
ಧರಧರವರ್ಣ ವಿಜಯ ವಿಠ್ಠಲ ಕೃಷ್ಣ
ವರಣನಾಗಿ ನಾಕುವ ಕೇಳು ಮನವೆ ॥ 4 ॥

॥ ಆದಿತಾಳ ॥

ಷಡುರಸಕೂಡಿದ ಮಹಾ ಪ್ರಸಾದವೆ ಉಳ್ಳ ।
ಎಡೆಯು ಕಣ್ಣಿನಿಂದ ಕಂಡಾಗತಿದೋಷ
ಸುಡುವುದು ಶುದ್ಧ ಬಹು ಭಕುತಿ ಕೊಡುವುದು ।
ತಡಿಯಾದೆ ಅಡಿಗಡಿಗೆ ಹರಿನಾಮಾ ।
ನುಡಿಸುವುದು ಜ್ಞಾನದಲ್ಲಿ ।
ಒಡನೆ ಬಂದು ತುತ್ತುಕೊಂಡವನ ಭಾಗ್ಯಕ್ಕೆ
ಕಡೆಗಾಣೆ ಲೋಕದೊಳಗವನೆ ಮಹಾಧನ್ಯನು ।
ಒಡಲತುಂಬ ಮೆದ್ದವಗೆ ವರಗಳ ಹರಿ ಪನು ।
ಕೊಡಲಿಯೆಂದು ತನ್ನ ಸತಿಯು ಕೂಡಾಡುವ
ಪಡಿಗಾಣೆ ಭಾರ್ಗವಕ್ಷೇತ್ರದೊಳಿದಕೆಲ್ಲ
ಉಡುಪಿಯೆಂದೆನಿಸಿತು ಚಂದ್ರನ್ನ ದೆಶೆಯಿಂದ
ದೃಢವಾಗಿ ಇದ್ದು ಮನವೆ ಯಾತ್ರೆ ಪೂರೈಸು ।
ಬಿಡನು ಯಾದವಕೃಷ್ಣ ಅನಂತಜನುಮಕ್ಕೆ
ಪೊಡವಿರಮಣ ನಮ್ಮ ವಿಜಯ ವಿಠಲರೇಯ
ಜಡಿಮತಿಗಾದರು ತನ್ನವನೆನಿಸುವ ॥ 5 ॥

॥ ಜತೆ ॥

ಬೀಜ ಯಾತ್ರೆ ಇದು ಕರ್ಮದ ಘಸಣಕ್ಕೆ -
ತೇಜೋಮಯ ಕೃಷ್ಣ ವಿಜಯ ವಿಠಲ ಮನವೆ ॥

ರಾಗ ·　　　　　　　　　　　　　　　　　॥ ತಾಳಧ್ರುವ ॥

ಮಧ್ವಮತದಭಾಗ್ಯ ಎಂಥಾದೊ ಎಂಥಾದೋ ।
ದುಗ್ಧಾಬ್ಧಿಯಂತೆ ಪ್ರಕಾಶವಾಗಿ
ದಿಗ್ದೇಶದೊಳು ತುಂಬಿ ಸೂಸುತಲಿದೆ ಇದೇ ।
ಸಿದ್ಧಾಂತ ಪ್ರಮೇಯವನು ಪ್ರತಿದಿನದಲಿ ।
ನಿರ್ಧಾರವಾಗಿ ಗುಣಿಸಿ ಪೇಳುವುದಕೆ ನಿತ್ಯ ।
ರುದ್ರಾದಿಗಳಿಗಿದು ಅದ್ಭುತವೋ ।
ಭದ್ರಗತಿ ಬೇಕಾದಮನುಜ ಇಲ್ಲಿಗೆ ಬಂದು ।
ಶುದ್ಧಾತ್ಮನಾಗಿ ಒಮ್ಮೆ ಸ್ಮರಿಸಲಾಗಿ ।
ನಿರ್ದೋಷನಾಗುವನೇನೆಂಬೆನಯ್ಯಾ ಕರು –
ಣಾಬ್ಧಿಯೋ ಕಾಣೊ ನಮ್ಮ ಗುರುರಾಯರು ।
ಅಬ್ಧಿಮೇಖಿಲ ಅಜ್ಞಾನವ್ಯಾಪಿಸಿ ।
ಬದ್ಧ ಭವದೊಳು ಸೆಲೆಗಾಣದೆ ।
ಬಿದ್ದು ಹೊರಳುತಿರೆ ಜೀವೇಶ ಒಂದೆಂದು ।
ಶ್ರದ್ಧೆಯಿಲ್ಲದೆ ಸುಜನ ಬಳಲುತಿರಲು
ಉದ್ಧರಿಸುವೆಸಂದು ಅತಿ ತೀವ್ರದಲಿ ಅ –
ವಿದ್ಯಾ ಕಾಮ ಕರ್ಮ ತತಿಗಳನು ।
ಒದ್ದು ಕಡೆಗೆ ನೂಕಿ ಬೇದಾರ್ಥಮಾರ್ಗ ತೋರಿ ।
ಸದ್ವೈಷ್ಣವರಾಗಿ ಮಾಡಿ ನಗುತ ತಪ್ತ –
ಮುದ್ರೆಯನಿತ್ತು ಮೋದದಿಂದಲಿ ಪರಮ ಮುಖ್ಯ
ವಿದ್ಯಾರಚಿಸಿ ವಿಶೇಷಮಾರ್ಗದ ।
ಪದ್ಧತಿಯನ್ನು ತೋರಿ ಪರಮತವೆಂಬೊ
ದಿಗ್ದಂತಿಗಳಿಗೆ ಅಂಕುಶವೆನಿಪ
ಮಧ್ವರಾಯರ ಮತದ ಭಾಗ್ಯವೇ ಭಾಗ್ಯವೇ ಸೌಭಾಗ್ಯ ।
ಇದ್ದಲ್ಲಿ ಸುಧಾ ವರ್ಷಗರೆವುರಿದೆಕೊ ।
ಖದ್ಯೋತ ಉದಿಸಲು ಸರ್ವಚಾದೆಗೆ ನೋಡು ।
ಉದ್ದಿನಷ್ಟು ಖೇದ ಪುಟ್ಟದಕಾಣೋ ।
ಬುದ್ಧಿವಂತರಾಗಿ ತಮ್ಮ ತಮ್ಮ ಸಾಧನ ।
ಇದ್ದದ್ದೆ ಮಾಡಿಕೊಂಡು ಸುಖಿಸುವರು
ಈ ಧರೆಯೊಳು ಕೇಳು ತನ್ನಿಂದ ಉಪಕಾರ ।

ಪದ್ಮ ಬಾಂಧವನಿಗೆ ಅಣುಮಾತ್ರವು ಇಲ್ಲ ।
ತದ್ವೇಷವನ್ನೇ ಮಾಡಿ ಅಪಕಾರದಿಂದ ರವಿಗೆ ।
ಬದ್ಧಗೈಸುವ ಶಕ್ತಿ ಮೊದಲೆ ಇಲ್ಲ ।
ಪೊದ್ದಿಕೊಂಡು ಬಂದ ಹೊದರಿನೊಳಗೆ ಅಡ –
ಗಿದ್ದಾಗಿ ತೆರುವಾಯು ಇದೆ ನಾಮದ ।
ಇದ್ದ ಶಕುನಿ ವ್ಯರ್ಥ ದೋಷಿಸಲೇನಹುದೊ ।
ಹೃದ್ರೋಗವಲ್ಲದೆ ಆದರಂತವೋ ।
ಮಧ್ವರಾಯರ ಮತದ ಭಾಗ್ಯವೆ ಸೌಭಾಗ್ಯ ।
ನಿದ್ರೆಯೊಳಗಾದರು ಎಚ್ಚೆತ್ತು ನೋಡಿದರು ।
ಉದ್ರೇಕ ಆನಂದ ಮುಂದೆ ವರ್ಣಿಸಲರಿಯೋ
ಶಬ್ದಮಾತುರ ಕೇಳಿ ಬರಲು। ಈ ಪರಿ ಸಾ –
ನ್ನಿಧ್ಯವಾಗಿದ್ದ ಜನರ ಪುಣ್ಯವೆಂತೋ ।
ಮಧ್ವವಲ್ಲಭ ನಮ್ಮ ವಿಜಯ ವಿಠ್ಠಲನಿಲ್ಲಿ ।
ಇದ್ದ ನೊಬಗು ನೋಡು ಆನಂದತೀರ್ಥರಿಂದ ॥ 1 ॥

॥ ಮಠ್ಯತಾಳ ॥

ತತ್ವ ವಿಚಾರವನು ತಿಳಿದ ಮನುಜ ಮನುಜ ।
ಉತ್ತಮ ಉತ್ತಮನು ಆಪಾಮಜನುಮಕ್ಕೆ ।
ವೃತ್ತಿರೂಪದಲ್ಲಾದರು ಜೀವನ್ಮುಕ್ತನು ।
ನಿತ್ಯ ನಿತ್ಯವನು ಧ್ಯಾನವ ಮಾಡುವನು ।
ತತ್ವಳಿಸುವ ಮಧ್ವಮತವನು ಪೊಂದಿದವನು ।
ಮೃತ್ಯುವಿಗಂಜ ಕಾಲಗೆ ಭಯಪಡನು ।
ಮರ್ತ್ಯಲೋಕದಲ್ಲಿ ಅವನೆ ಸಿದ್ಧಪುರುಷ ।
ಎತ್ತಲಾದರು ಅವನು ಇದ್ದ ದಿಕ್ಕಿಗೆ ಹಸ್ತ –
ವೆತ್ತಿ ಮುಗಿದು ಮಹಾಧನ್ಯನಾಗಲಿ ಬೇಕು ।
ಇತ್ತ ಕೇಳು ಮನವೆ ಶ್ರುತಿ ಪುಶಿಯೆಂಬುವನ ।
ಉತ್ತರ ನಿಜವೇನೊ ಗತಿಮಾಗನೊ ಎಂದರೆ ವಾದಿಸುವನಕೂಡ ।
ಹೊತ್ತು ಹೊತ್ತಿಗೆ ಬಡಿದಾಡಿದರೇನುಂಟೊ ।
ಕೀರ್ತಿಪುರುಷ ನಮ್ಮ ವಿಜಯವಿಠಲರೇಯನ್ನ ।
ಚಿತ್ತದಲಿ ಇಟ್ಟ ಮಧ್ವರಾಯರೆ ಗುರುಗಳು ॥ 2 ॥

ಎಂದಾ ಕರುಣಾಳೋ ಸರ್ವಜ್ಞರಾಯರು ।
ಚಿಂತಾಮಣಿಯೆ ಕಾಣೊ ಚಿರಕಾಲ ನಮಗೆಲ್ಲ
ಶಾಂತರಾಗಿ ಲೋಕಮಲನದರ್ಪಣದಂತೆ ।
ಬ್ರಾಂತಿಯಲ್ಲಿ ನಿತ್ಯ ಮುಳುಗಿರಲು ।
ಮಂತ್ರೋಪದೇಶಿಸಿ ಅಮೃತಗರೆವ ಮಹಾ –
ಗ್ರಂಥಗಳ ಮಾಡಿ ಮಂದಜನಕೆ ।
ಕಿಂತು ಪೋಗಾಡಿಸಿ ಅನಾದಿಯಿಂದ ಬಂದ ।
ಗ್ರಂಥಿಯನು ಬಿಡಿಸಿತತ್ವಾನುಸಾರ
ಎಂತೆಂತು ಮನಸಿಗೆ ಸೌಕರಿಯಾಗುವ ।
ಪಂಥ ತೋರಿದರಯ್ಯಾ ಭೇದಾರ್ಥದಿ ।
ವಿಂತೆ ಮುಂತೀಗ ನೂರಾರು ಕೋಟಿಕುಲಕೆ ।
ಅಂತಕನ ಬಾಧೆಯಿಲ್ಲದಂತೇಪೆ ।
ಸಂತೋಷವಿತ್ತು ಎಂದಿಗೆ ಪ್ರತಿಕೂಲಾದ ।
ಕಾಂತಾರಕಡಿವ ಕುಠಾರಕಣೋ ।
ಇಂತು ಸಜ್ಜನರನ್ನು ಪಾಲಿಸಿ ಅತಿತೀವ್ರ ।
ಸಂತರಿಗೆ ನವವಿಧ ಭಕ್ತಿ ಪುಟ್ಟು –
ವಂತೆ ಕೇವಲ ಸಾಧನಕೆ ದ್ವಾರಕಿಯಲ್ಲಿ ।
ನಿಂತಿದ್ದ ನಿಗಮಗೋಚರ ರುಕ್ಮಿಣಿ
ಕಾಂತನ ವಿಗ್ರಹ ನಿಲ್ಲಿಸಿ ಲಕ್ಷಣದಿಂದ ।
ತಂತ್ರ ಸಾರೋಕ್ತದಿ ಪೂಜೆ ಮಾಡಿದರು ।
ಎಂಥ ಗುರುಗಳೋ ಮಧ್ವಮುನಿರಾಯರು ।
ಅಂತುಗಾಣೆನೊ ನಾನು ರಜತಪೀಠದ ಮಹಿಮೆ ।
ಎಂತೆಂತು ಪೊಗಳಿದರೆ ಪೂಸಬಗೆಯೊ ।
ಕಂತುಪಿತನು ಇಲ್ಲಿ ನೆಲೆಯಾದ ನಾನಾ
ವೃತ್ತಾಂತ ಸ್ಕಂದನಿಗೆ ಶಿವನು ಪೇಳಿಪ್ಪನೊ
ದಂತ ಕಥೆಯಲ್ಲ ಧರಣಿಯೊಳಗೆ ಆ –
ದ್ಯಂತ ಕಾಲದಲ್ಲಿದೆ ಸಿದ್ಧವೆನ್ನಿ ।
ಅಂತರಂಗದ ಸ್ವಾಮಿ ವಿಜಯವಿಠ್ಠಲ ಸ್ವ –
ತಂತ್ರ ಪುರುಷ ಮಧ್ವಮುನಿ ಹೃದಯದಿಂದ ॥

॥ ಅಟತಾಳ ॥

ಏನು ಸುಕೃತವೋ ಮತ್ತಾವ ಸಾಧನವೊ ।
ಆನಂದ ತೀರ್ಥರ ಕರವಾರಿಜದಿಂದ ।
ಭಾನುವಿನಂತೆ ಪ್ರಕಾಶವಮಯನಾಗಿ ।
ಈ ನಿಧಿಯಲ್ಲಿ ನಿಲ್ಲಿಸಿದ ಬಾಲರೂಪ ।
ಮಾನವ ವೇಷ ಬಕತೆರ ಲಾಂಛನ
ಮಾನಸದಲ್ಲಿ ನೋಡಿ ಧನ್ಯನಾದನೋ
ಎನ್ನ ಏನು ಸುಕೃತವೊ ನಾನು
ನನ್ನ ಗೋತ್ರರ ದೇಹ ಈ ಜನ್ಮ ।
ನಾನಾ ಪ್ರಕಾರದಿ ಮಾಡಿದ ಕರ್ಮವು
ಅನಂತಯೋನಿಯಲ್ಲಿ ಬಂದು ಮಾಡಿದ ಬಗೆ ।
ಕಾನನಗಿರಿ ಗ್ರಾಮ ಕ್ಷೇತ್ರ ಸರೋವರ ।
ಘನ ಭವನ ಮೃಗಪಕ್ಷಿವಾರಿಚರ ।
ಮಾನವ ತರು ಜಾತಿ ನಾಮಪದಲ್ಲಿಪ್ಪವು ।
ಏನೆಂಬೆ ಎಲ್ಲೆಲ್ಲಿ ಇದ್ದ ವಸ್ತುಗಳೆಲ್ಲ ।
ಭಾನು ಪ್ರಕಾಶದ ಪರಿಯಂತ ಚೆನ್ನಾಗಿ ।
ಆನೇನಾದದು ನೋಡಿ ಹೇಳಿ ಕೇಳಿ ಆ –
ಘ್ರಾಣಿಸಿ ಮೆದ್ದುದು ಇದರ ವಿಸ್ತಾರವೆಲ್ಲ ।
ಪುನೀತವಾಗಲಿ ನಿರಂತರಬಿಡದಲೆ ।
ಆನಂದತೀರ್ಥರ ಕರುಣಕೆ ಎಣೆಯೆ ।
ಜ್ಞಾನಪೂರ್ಣ ವಿಜಯ ವಿಠ್ಠಲರೇಯ ।
ಧ್ಯಾನ ಮಾಡುವ ಜನಕೆ ಅತಿ ಸುಲಭಸಾಧ್ಯ ॥ 4 ॥

॥ ಆದಿತಾಳ ॥

ಶ್ರೀಮದುಡುಪಿನಯಾತ್ರೆಯೆ ಯಾತ್ರೆ ।
ಶ್ರೀಮದಾನಂದತೀರ್ಥ ಗುರುಗಳೆ ಗುರುಗಳು ।
ಭೂಮಿಯೊಳು ಇದಕ್ಕೆ ಸಮ ಆಧಿಕ್ಯಕಾಣೆ
ರೋಮ ರೋಮದಲ್ಲಿ ಪುಣ್ಯ ತುಂಬಿ ತುಳುಕುವುದು
ಶ್ರೀಮದ್ವೈಷ್ಣವ ಜನ್ಮವೆ ಜನ್ಮವೆನ್ನಿ
ಶ್ರೀಮದ್ಭಾಗವತ ಶ್ರವಣವೆ ಶ್ರವಣವೆನ್ನಿ ।
ಶ್ರೀಮದ್ವಿಷ್ಣು ಭಕ್ತಿ ಇದೆ ಮಹಾಭಕ್ತಿಯೆನ್ನಿ ।

ಯಾವ ಯಾವಕೆ ಸ್ಮರಿಸೆ ಸಕಲ ಸಂಪದವಕ್ಕು ।
ಈ ಮನೋ ಉತ್ಸವ ಇಲ್ಲಿ ಪುಟ್ಟಿಂದೆ ।
ವ್ಯೋಮ ಗಂಗಾದಿ ಕ್ಷೇತ್ರ ನೋಡಲು ಆಗದಿದಕೊ
ತಾಮರಸ ಪೀರನ್ನ ಲೋಕಕ್ಕೆ ಸಮ ವಿಬುಧ —
ಸ್ತೋಮ ಕೊಂಡಾಡವ ಸರ್ವಾಗವದಿಂದ ।
ತಮ ಬುದ್ಧಿ ನಾಶವಹುದು ಚರಮಯರಾತ್ರಿ ಇದೆ ।
ಶಮದಮಗುಣದಲ್ಲಿ ಮುಕ್ತರೊಳಿಪ್ಪ ।
ರಮೆ ಮನೋಹರ ನಮ್ಮ ವಿಜಯ ವಿಠಲರೇಯ
ನೇಮ ನಿತ್ಯದಲ್ಲಿ ಮನಸುಕೊಡುವನು ನಿತ್ಯದಲ್ಲಿ ॥

॥ ಜತೆ ॥

ಮಧ್ವರಾಯರ ಕರುಣ ಪಡೆದು ಪಾವನರಾಗಿ
ಸಿದ್ಧನಾಗುವುದು ವಿಜಯವಿಠಲನ ಪೊಂದಿ ॥

ರಾಗ ಭೈರವಿ — 11 — ॥ ಧ್ರುವತಾಳ ॥

ನಳಿನಾಭಿ ಸುಮನೋಹರವಾದ ಉದರ ತ್ರಿ —
ವಳಿಯಲ್ಲಿ ತ್ರಿಲೋಕಾತ್ರಯ ಮಾಡಿಕೊಂಡಿರೆ
ಎಳೆ ತುಳಸಿ ಕೌಸ್ತುಭಮಣಿ ಸಿರಿವತ್ಸ ಪರಿ —
ಮಳ ದ್ರವ್ಯ ಸೂಸುತಿರೆ ಸರ್ವಾಂಗಣದಲ್ಲಿ ನಿತ್ಯ — ।
ಬೆಳಗುವ ಎಳೆನಗೆ ಕುಂದ ಕುಸುಮದಂತೆ ।
ನಳನಳಿಸುವ ನಳಿತೋಳು ಉನ್ನತಬಾಹು —
ಗಳ ಕರ್ಪೂರದ ಕರಡಿಗೆಯಂದದಿ ವನಾ —
ಗಿಳಿವಿಂಡು ನೋಲುವಧರ ಕಪೋಲ ಕರ್ಣ
ವಲಿಪೊ ಕುಂಡಲ ಮುಂಬಣೆಯಲ್ಲಿ ತೂಗುವ ।
ಅಳಿಯ ಕೂದಲು ವಿಸ್ತಾರನೊಸಲುತಿಲಕ ।
ಚೆಲುವ ಕಂಕಣ ಕಡಗ ಬೆರಳ ನಾನಾ ಉಂಗರ ।
ಪೊಳೆವ ನವರತ್ನ ವೈಜಯಂತಿಮಾಲೆ ಸೊಬಗು
ದಳವಾದ ಪಾದ ಕನಕಸೂತ್ರ ನವ ಉತ್ತ —
ತ್ಪಲದಳಲೋಚನೆ ಮಂಡಲಾ ಮಂಡಿತ ದೇವ
ಝಳ ಝಳಿಸುವ ಜಗನ್ಮೋಹಿಪ ವಿಚಿತ್ರಕಾಂತಿ ।

ಬಲು ಸೂರ್ಯರ ಬೆಳಗವಂದೆಸವಾಸವೆಸೆ ।
ಅಲವಬೋಧ ಮುನಿಯಿಂದ ಪೂಜೆಯಗೊಂಡ ।
ಸುಲಭದೇವರದೇವ ವಿಜಯವಿಠಲ ಕೃಷ್ಣ ।
ಜಲಧರವರ್ಣ ಸುಗುಣ ಉಡುಪಿನಿವಾಸ ॥ 1 ॥

॥ ಮಟ್ಟತಾಳ ॥

ತಿಳರಾಗಾವಿಯ ಪೊಂಬಟ್ಟೆ ವಸನ ।
ಘಿಳಿ ಘಿಳಿಲುನಾದ ಕಿಂಕಿಣಿ ಕಟಿಸೂತ್ರ ।
ಮಲೆವರ ಗಂಡಸಂಬೊ ಬಿರಿದು ಬಾವಲಿ ಕಡಿ ।
ಇಳಿಯೊಳು ಮೆರೆವೊ ವಿಶ್ವತೋಮಯಮಹಿಮ ।
ನೆಲನ ಪಾವನವಾದ ಚರಣಭೂಷಣ ವಪ್ಪೆ ।
ಪ್ರಳಯರಹಿತ ನಮ್ಮ ವಿಜಯವಿಠಲ ಉಡುಪಿ -
ನಿಲಯ ಯಾದವ ಕೃಷ್ಣ ಮಧ್ವ ಮುನಿವರದ ॥ 2 ॥

॥ ತ್ರಿವಡಿತಾಳ ॥

ಮೊಲ್ಲೆ ಮಲ್ಲಿಗೆ ಜಾಜಿ ಮರುಗ ಮಂದಾರ ।
ಎಲ್ಲ ಪೂಗಳು ತುರುಬಲಿ ತುರುಬಿದ ಜಾಣ ।
ಸೊಲ್ಲು ಕೊಳಲಧ್ವನಿಗೆ ಗೋಪಾಂಗನಯರ ಮನ ।
ಬಿಲ್ಲುಬಾಗಿದಂತೆ ನಿನ್ನ ತತ್ತರಿಸಿದೆ
ವಲ್ಲಡಿಯೊಳು ತುರುಗಳ ಕೂಡೆ ನಲಿದನೆ ।
ಇಲ್ಲಿಗೆ ಬಂದ ಬಗೆ ಪೇಳು ಪರಮಾತ್ಮ ।
ಎಲ್ಲೆ ಗೋಕುಲ ವೃಂದಾವನ ಎಲ್ಲೆ ದ್ವಾರಕ –
ದಲ್ಲಿ ಮೆರೆದು ವೈಭೋಗದಿಂದೊಪ್ಪದೆ ।
ಕಲ್ಲಿವಾಗರ ಮೆದ್ದ ವಿಜಯವಿಠಲ ಸರ್ವ –
ರಲ್ಲಿ ಇಪ್ಪ ಉಡುಪಿ ಕೃಷ್ಣ ಮಧ್ವಮುನೀಶ ॥ ॥ 3 ॥

॥ ಅಟ್ಟತಾಳ ॥

ನಿನ್ನ ಪಾದವೆ ಎನ್ನ ಜೀವಕೆ ಜೀವನ್ನ ।
ನಿನ್ನ ನೋಡುವುದೆನ್ನ ಕಣ್ಣಿಗೆ ಜೀವನ್ನ ।

ನಿನ್ನ ಶ್ರವಣ ಎನ್ನ ಕರ್ಣಕೆ ಜೀವನ್ನ ।
ನಿನ್ನ ಪಾಡುವುದೆನ್ನ ಜಿಹ್ವೆಕ್ಕೆ ಜೀವನ್ನ ।
ನಿನ್ನ ಎಂಜಲು ಎನ್ನ ವದನಕ್ಕೆ ಜೀವನ್ನ ।
ನಿನ್ನ ಸೇವೆ ಎನ್ನ ಹಸ್ತಕ್ಕೆ ಜೀವನ್ನ ।
ನಿನ್ನ ಯಾತ್ರೆಗಳೆನ್ನ ಚರಣಕ್ಕೆ ಜೀವನ್ನ ।
ನಿನ್ನ ಧ್ಯಾನವೆ ಎನ್ನ ಮನಸಿಗೆ ಜೀವನ್ನ ।
ನಿನ್ನ ಪಾದೋದಕ ಪೀಯೂಷ ಪ್ರ–
ಪನ್ನ ಜೀವನವಯ್ಯ ಜೀವೇಶ
ನಿನ್ನವರದಾಸ ಒಮ್ಮೆ ನೆನಿಸಿದ್ದು
ಎನ್ನ ಸಾವಿರ ಕುಲ ಕೋಟಿಗೆ ಜೀವನ್ನ ।
ಉನ್ನತ ಗುಣನಿಧಿ ವಿಜಯವಿಠಲರೇಯ ।
ಮನ್ನುಜವಿಗ್ರಹ ಉಡುಪಿ ಶ್ರೀಕೃಷ್ಣ ।
ಬಣ್ಣಿಪ ಗುರುಮಧ್ವಮುನಿಗೆ ಒಲಿದು ಬಂದ ॥ 4 ॥

॥ ಆದಿತಾಳ ॥

ಶರಧಿ ಆಪೋಶಣ ಮಾಡಿದನೊಬ್ಬ ।
ತರಣಿ ಸಂಗಡ ರಕ್ಷೆಮಾಡಿದನೊಬ್ಬ ।
ಪುರವನು ಎಬ್ಬಿಸಿ ಉಳಹಿದನೊಬ್ಬ ।
ಶರದಲ್ಲಿ ಹೊಳಿಯನು ಬಂಧಿಸಿದನೊಬ್ಬ ।
ಮುರಿವಮಾರಿಗೆ ಹಣಿಯನದಿದ್ದವನೊಬ್ಬ ।
ಉರಗವ ಬಿಡಿಸಿ ಸಭೆಗೆ ತಂದವನೊಬ್ಬ ।
ಸುರರಿಗೆ ಉಪಕಾರ ಮಾಡಿದವನು ಒಬ್ಬ ।
ಉರಿವ ಗರಳವನು ನುಂಗಿ ನಗುವನೊಬ್ಬ ।
ಹರಿ ನಿನ್ನ ಭಕ್ತರ ಶಕ್ತಿಗೆ ನಮೋ ನಮೋ ।
ಪರಮಗುರು ಮಧ್ವಮುನಿಗೊಲಿದ ಕೃಷ್ಣ ।
ಸುರವರ ಪರಲೀಲ ವಿಜಯವಿಠಲರೇಯ ।
ಧರಣಿಗಧಿಕ ಉಡುಪಿನವಾಸ ದಯಾಂಬುಧಿ ॥ 5 ॥

॥ ಜತೆ ॥

ಅಡಿ ತೊಲಗದಲಿ ಹೃದಯ ಸದನ ಮಧ್ಯೆ ।
ಕಡಗೋಲು ಪಿಡಿದ ವಿಜಯ ವಿಠ್ಠಲಕೃಷ್ಣ ॥

—●—

# 2 - ಕೀರ್ತನೆಗಳು

-1-

ರಾಗ : ಪಂತುವರಾಳಿ – ರೂಪಕತಾಳ

ಆವ ಕುಲವೊ ರಂಗ ಅರಿಯಬಾರದು ॥ ಪ ॥

ಆವ ಕುಲವೆಂದರಿಯಬಾರದು ಗೋವುಕಾವ ಗೊಲ್ಲನಂತೆ
ಪಾರಿಜಾತದ ವೃಕ್ಷವ ಸತ್ಯಭಾಮೆಗೆ ತಂದಿತ್ತನಂತೆ ॥ ಅ ॥ ಪ ॥

ಗೋಕುಲದಲ್ಲಿ ಪುಟ್ಟಿದನಂತೆ ಗೋವಳರೊಡನ ಆಡಿದನಂತೆ
ತಾ ಕೊಳಲನೂದಿ ಮೃಗಪಕ್ಷಿಗಳ ಮರುಳುಮಾಡಿದ ದೇವನಂತೆ ॥ 1 ॥

ಕಾಲಲ್ಲಿ ಶಕಟನ ಒದ್ದನಂತೆ ಗೂಳಿಯಕೊಂಬು ಕಿತ್ತನಂತೆ
ಕಾಳಿಂಗನ ಹೆಡೆಯ ತುಳಿದು ಬಾಲೇರಿಗೊಲಿದ ದೇವನಂತೆ ॥ 2 ॥

ಗೊಲ್ಲತೇರ ಮನೆಗಳಲ್ಲಿ ಕಳ್ಳತನವ ಮಾಡಿದನಂತೆ
ಮೆಲ್ಲನೆ ಪೂತನಿ ಅಸುವಹೀರಿ ಬಲ್ಲಿದ ಕಂಸನ ಕೊಂದನಂತೆ ॥ 3 ॥

ಸರ್ಪ ತನ್ನ ಹಾಸಿಗೆಯಂತೆ ಪಕ್ಷಿ ತನ್ನ ವಾಹನವಂತೆ
ಸರ್ಪಭೂಷಣ ಮೊಮ್ಮಗನಂತೆ ಮುದ್ದುಮುಖದ ದೇವನಂತೆ ॥ 4 ॥

ಕರಡಿಮಗಳ ತಂದನಂತೆ ಶರಧಿಮಗಳು ಮಡದಿಯಂತೆ
ಧರಣಿಯನ್ನು ಬೇಡಿದನಂತೆ ಈರೇಳು ಲೋಕಕ್ಕೆ ಒಡೆಯನಂತೆ ॥ 5 ॥

ತರಳತನದಿ ಒರಳನೆಳೆದು ಮರನಕಡಹಿ ಮತ್ತವರಸಲಹಿ
ದುರುಳ ರಕ್ಕಸರನು ಕೊಂದ ಚೆಲುವ ಹಯವದನನಂತೆ ॥ 6 ॥

ಹಡಗಿನಿಂದಲಿ ಬಂದನಂತೆ ಕಡಲತಡಿಯಲಿ ನಿಂದನಂತೆ
ಒಡನೆ ಮಧ್ವರಿಗೊಲಿದನಂತೆ ಒಡೆಯ ಹಯವದನನಂತೆ ॥ 7 ॥

## –2–

ರಾಗ : ಶಂಕರಾಭರಣ – ಅದಿತಾಳ

ಆನಂದಾ ಆನಂದಾ ಮತ್ತೆ ಪರಮಾನಂದ
ಆ ನಂದನ ನಂದನೊಲಿಯೆ ಏನಂದದ್ದೆ ವೇದವೃಂದಾ ॥ ಪ ॥

"ಅ"ಕಾರ ಮೊದಲು "ಕ್ಷ" ಕಾರಾಂತ ಈ ಮಹಾವರ್ಣವೆಲ್ಲ ।
ಸ್ವಾಮಿಯಾದ ವಿಷ್ಣುವಿನ ನಾಮವೆಂದು ತಿಳಿದವಗೆ ॥ ೧ ॥

ಪೋಪದು ಬರುತಿಪ್ಪದು ಕೋಪಶಾಂತಿ ಮಾಡುವುದು ।
ರೂಪಲಾವಣ್ಯವು ಹರಿವ್ಯಾಪಾರವೆಂದವರಿಗೆ ॥ ೨ ॥

ಜಲಕಾಷ್ಠ ಶೈಲ ಗಗನ ನೆಲ ಪಾವಕ ವಾಯು ತರು ।
ಫಲ ಪುಷ್ಪ ಬಳ್ಳಿಲಿ ಹರಿ ಒಳಗೆ ವ್ಯಾಪ್ತನೆಂದವಗೆ ॥ ೩ ॥

ತಾರೊ ಬಾರೊ ಬೀರೊ ಸಾರೊ ಮಾರೊ ತೋರೊ ಹಾರೊ ।
ಹೋರೊ ಸೇರೊ ಕೋರೋದೆಂಬ ದಿಶಾಪ್ರೇರಣೆ ಎಂದವಗೆ ॥ ೪ ॥

ಮಧ್ವಶಾಸ್ತ್ರ ಪ್ರವಚನ ಮುದ್ದುಕೃಷ್ಣನ ದರುಶನ ।
ಸಿದ್ಧ ವಿಜಯವಿಠಲನ್ನ ಪೊಂದಿ ಕೊಂಡಾಡುವವರಿಗೆ ॥ ೫ ॥

## –3–

ರಾಗ : ಕಾಂಬೋಧಿ – ಝಂಪೆತಾಳ

ಆವ ಜನುಮದ ಪುಣ್ಯ ಫಲಿಸಿತೆನಗೆ ।
ಈ ಉಡುಪಿ ಕೃಷ್ಣನ ಪ್ರಸಾದ ಭುಂಜಿಸಿದೆ ॥ ಪ ॥

ಲವಣವನು ಸವಿದುಣಲು ಜನುಮದಲ್ಲಿದ್ದ ।
ಭವರಾಶಿಗಳು ಹಾರಿ ಬಯಲಾದವು ॥
ನವವಿಧದ ಭಕುತಿಯ ಮಾರ್ಗವನೆ ತಿಳಿದು ಮಾ ।
ನವರೊಳಗೆ ಪರಿಶುದ್ಧನಾದೆ ಗುರು ಕರುಣದಲಿ ॥ 1 ॥

ಶಾಖಫಲ ಕೈಕೊಳಲು ಆರಿಷಡ್ವರ್ಗಗಳಿಂದ ।
ಶೋಕವನು ಬಂದಿರಲು ಬೆನ್ನುಬಿಟ್ಟು ॥

ತಾಕೆಟ್ಟು ಪೋಗುವವುವಸೆಂಬೆ ಸೋಜಿಗವ ।
ಲೋಕದೊಳಗೆ ನಮ್ಮ ಕುಲ ಗೋತ್ರಜರೇ ಧನ್ಯ ॥ 2 ॥

ಸೂಪವನು ಉಂಡರೆ ಮುಂದಟ್ಟಿ ಬರುತಿಪ್ಪ
ಆಪತ್ತು ಕಳವಳಿಸಿ ಪಿಂದಾಪವು ।
ಭಾಪುರೇ ಮುಕ್ತಿ ಮಾರ್ಗಕೆ ಬಲು ತೀವ್ರದಲಿ ।
ಸೋಪಾನ ದೊರಕಿದವು ತುತಿಸಲಳವೇ ಇಲ್ಲಿ ॥ 3 ॥

ಭಕ್ಷಗಳ ಮೆಲಲಾಗಿ ಬಕ್ತಿ ಪುಟ್ಟುವುದಯ್ಯಾ ।
ಅಕ್ಷಯವಾಗುವುದು ಇದ್ದ ಪುಣ್ಯ ॥
ಅಕ್ಷರವಂತೆನಾಗಿ ಸರ್ವದಾಸರು ಉಂಟು
ಮೋಕ್ಷಸಾಧನ ಮಾಳ್ಪ ಮನಸುಪುಟ್ಟಿತು ನೋಡಿ ॥ 4 ॥

ಓದನವ ಉದರದೊಳು ತುಂಬಲಾಕ್ಷಣದಲ್ಲಿ
ಸಾಧುಗಳ ಸಂಗತಿ ಘಟಿಸುವುದು ॥
ಭೇದಾರ್ಥ ಜ್ಞಾನ ಬಂದೊದಗುವುದು
ಗುರುಪೂರ್ಣಬೋಧರ ಮತೆದಲ್ಲಿ ಲೋಲ್ಯಾಡುವನಾದಾ ॥ 5 ॥

ಘೃತ ದಧಿ ತಕ್ರ ಮೊದಲಾದ ವ್ಯಂಜನವ್ರಣಲು ।
ಹಿತವಾಗಿ ಸಕಲ ಇಂದ್ರಿಯುಗಳು ।।
ಸತತ ದುರ್ವಿಷಯಕ್ಕೆ ಪೋಗದಲೆ ಆವಾಗ ।
ರತಿಪತಿಪಿತನ ಪದಸೇವೆಯೊಳಗಿಪ್ಪವೂ ।। 6 ।।

ಕೃಷ್ಣ ಸಂದರುಶನ ಮೃಷ್ಟಾನ್ನ ಭೋಜನ ।
ಕಷ್ಟನಾಶನ ಸರ್ವಕರ್ಮಾಧಿಕ ।।
ಇಷ್ಟಾರ್ಥ ಸುಖಸೌಖ್ಯ ಮತ್ತಾವಲ್ಲಿಕಾಣೆ ।
ಸೃಷ್ಟಿಗೊಡೆಯು ವಿಜಯ ವಿಠಲನು ದಯವಾಗೆ ।। ॥ 7 ॥

–4–

ರಾಗ : ಪಾಡ – ತ್ರಿವಿಡಿತಾಳ

ಆವತಾ ಸುಖವೊ ಮತ್ತಾವಾನಂದವೊ
ಈ ಉಡುಪಿಯು ಯಾತ್ರೆ ಮಾಡಿದ ಮನುಜಗೆ ।।

ಮನದೊಳವೇಕ್ಷಿಸೆ ಅವನಿಗೆ ಹದಿನಾಲ್ಕು
ಮನುಗಳು ಭೂಮಿ ಆಳುವತೆನಕಾ
ಕನಕ ರಜತಪೀರ ಗೋಕುಲದಿಂದ ಸ
ಜ್ಜನ ಮಾರ್ಗದಲ್ಲಿ ಗುಣವಂತನೆನಿಸುವ ॥ ॥ 1 ॥

ಒಂದು ಹೆಜ್ಜೆಯನಿಟ್ಟು ಸಾಗಿ ಬರುತಲಿದೆ
ಅಂದೆ ಸುರರೊಳು ಗಣನೆ ಎನ್ನಿ
ಒಂದಕ್ಕೆ ನೂರಾರು ಯಾಗ ಮಾಡಿದ ಫಲ
ತಂದು ಕೊಡುವ ಆಜನಾದಿ ಕಲ್ಪ ಪರಿಯಂತೆ ॥ ॥ 2 ॥

ಅರ್ಧ ಮಾರ್ಗವು ಬರಲು ಒಂದ ದಿವಸದಲ್ಲಿ
ಸಾರ್ಧ ತ್ರಿಕೋಟಿ ದೇವತೆಗಳಲಿ
ಊರ್ಧ್ವರೇತಸನಾಗಿ ಮಿಂದ ಫಲವಕ್ಕು
ಮೂರ್ಧಾಭಿಷಿಕ್ತನು ಬ್ರಹ್ಮಾಯು ಪರಿಯಂತ ॥ ॥ 3 ॥

ಕ್ಷೇತ್ರದಿ ಬಳಿಗಾಗಿ ಬರಲು ಅವನ ಪಳು
ಗೋತ್ರ ನೂರೊಂದು ಕುಲದವರು
ಗಾತ್ರವ ಮರೆದು ರೋಮಾಂಚನದಿಂದಲಿ
ಪಾತ್ರಮಾಡೋರು ಮೋಕ್ಷಮಾರ್ಗವ ಸಾರಿ ॥ ॥ 4 ॥

ಸನ್ನಿಧಿಗೆ ಬಂದು ಕರವ ಜೋಡಿಸಿ ನಿಂದು
ಸನ್ನುತಿಸಿ ದರ್ಶನ ಮಾಡಲು
ತನ್ನ ಕರವ ತಿಳಿದು ಜ್ಞಾನಭಕುತಿ ಸಂ
ಪನ್ನ ವಿರಕುತಿಲಿ ಗತಿಗಭಿಮುಖನಾಹ ॥ ॥ 5 ॥

ಮಧ್ವ ಸರೋವರದಲಿ ಸ್ನಾನವಗೈದು
ಸಿದ್ಧಾಂತ ಕರ್ಮಗಳನನುಸರಿಸಿ
ಶುದ್ಧಾತ್ಮಕೃಷ್ಣನ್ನ ದೇವಾಲಯುವ ಸಾರೆ
ಪೂರ್ಣವಾ ಸತ್ಯಲೋಕದಾ ಸಭೆಯೊಳಗೆ ॥ ॥ 6 ॥

ಕೃಷ್ಣ ಕೃಷ್ಣ ಎಂದು ನವವಿಧ ಪೂಜೆಯನ್ನು
ದೃಷ್ಟಿಯಿಂದಲಿ ನೋಡೆ ಅವನೆ ಮುಕ್ತಾ
ಮುಟ್ಟಿ ಪೂಜಿಸುವರ ಸತ್ಪುಣ್ಯ ವಿಜಯ
ವಿಠ್ಠಲ ತಾ ಬಲ್ಲ ನರರೆಣಿಸಲಳವಲ್ಲ ॥ ॥ 7 ॥

—5—

ರಾಗ : ಭೈರವಿ – ಅಟ್ಟತಾಳ

ಆ ವೈಷ್ಣವ ಜನುಮು ಸಫಲವಿಂದು
ಈ ಉಡುಪಿಯ ಯಾತ್ರೆಗಭಿಮುಖವಾದುದು ॥ ॥ ಪ ॥

ಮನೋವಾಕ್ಕಾಯ ಕರ್ಮಗಳು ಬಲುಮರಿ ಇರಲು
ಮನುಜ ಪೋಗುವೆನೆಂದು ಒಮ್ಮೆ
ನೆನೆಸಿದಾಕ್ಷಣದಲ್ಲಿ ನಾಶವಾಗೋವು ಸುತ್ತನು ಸುತ್ತಿನುವ ಭವ
ವನಧಿಗೆ ಇದೇ ಮೂಲ ॥ ॥ 1 ॥

ದೇಶದೊಳಗುಳ್ಳ ನಾನಾ ಯಾತ್ರೆ ತೀರಥಾ
ಏಸುಬಾರಿ ಪೋಗಿ ಬರಲಿ ಉಂಟೆ
ಈ ಸುಲಭಯಾತ್ರೆ ಕಂಡವರಿಗೆ ದೊರೆಯುವು
ಲೇಸಾಗಿ ಕೇಳುವುದು ಕುತ್ಸಿತ ಭಾವವ ಬಿಟ್ಟು ॥ ॥ 2 ॥

ಕೃಷ್ಣರಾಯನ ದರುಶನಕೆ ಮನಮಾಡಿದ
ಶಿಷ್ಟಾಚಾರಗೆ ಲಿಂಗಕಾಯಭಂಗಾ-
ದಿಟ್ಟ ಮೂರುತಿ ವಿಜಯವಿಠ್ಠಲ ಕರುಣೆ ಜ್ಞಾನ
ಕೊಟ್ಟು ಪಾಲಿಸುವ ಬಲು ಮೂರ್ಖರಾದರೂ ಸಿದ್ಧ ॥ ॥ 3 ॥

—6—

ರಾಗ : ಅಹೇರಿ – ಅಟತಾಳ

ಇತ್ತ ಬಾರೂ ಒಲಿವುತ್ತ ಬಾರೂ
ಹತ್ತವತಾರದ ಚಿತ್ರಚಾರಿತ್ರ ಎನ್ನತ ಬಾರೊ ॥ ॥ ಪ ॥

ಒದ್ದು ಶಕಟನ ಮುರಿದ ಶಿಶುವೆ ನೀನೆದ್ದು ಬಾರೊ ಅ–
ಳದ್ದು ಬ್ರಹ್ಮಾಂಡವ ಸೀಳ್ದ ಮಹಿಮೆ ಸಾಲದ್ದೆ ಬಾರೊ
ಕದ್ದು ಬೆಣ್ಣೆನೇಕೆ ಮೆದ್ದೆ ದಾರಿದ್ರವೆ ಮುದ್ದೆ ಬಾರೊ ಆಡು–
ತಿದ್ದ ಮಕ್ಕಳ ನೀನು ಗುದ್ದಿದೂರನು ತರುತಿದ್ದೆ ಬಾರೊ ॥ 1 ॥

ಹಿಂದೆ ಬಾಯಿಂದರೆ ಮುಂದೆ ಬಾಹೆ ಗೋವಿಂದ ಬಾರೊ ಎನ್ನ
ಕಂದ ಬಾಯಿಂದರ ಮುಂದೆ ನಿಲುವೆ ಮುಕುಂದ ಬಾರೊ
ಬಂದೆನ್ನ ಮುಂದ ನೀ ನಿಂದಿರು ನಿತ್ಯಾನಂದ ಬಾರೊ
ಎಂದೆಂದು ಭಕುತರ ಹೊರೆದಿಹ ಕಾರುಣ್ಯಸಿಂಧು ಬಾರೊ ॥ ॥ 2 ॥

ಮಂಥನ ಮಾಡಲು ನಿಂತಕಡಗೋಲ ನೇಣಾಂತೆ ಬಾರೊ
ಸಂತರಿಗನುದಿನ ಸಂತೋಷವೀವ ನಿಶ್ಚಿಂತ ಬಾರೊ
ಅಂತವಿಲ್ಲದ ಮಾರಾಂತನ ಗೆಲಿವ ಕೃತಾಂತ ಬಾರೊ
ಅಂತಿಂತೆನದೆ ಮಾಕಾಂತ ಹಯವದನನಂತೆ ಬಾರೊ ॥ ॥ 3 ॥

–7–

ರಾಗ ವರಾಳಿ – ಅಟ್ಟತಾಳ

ಇದೇ ಭಕುತಿ ಮತಿಗೆ ಮುಕುತಿ
ಇದಕ್ಕಧಿಕವಾಗಿಪ್ಪ ನಿಧಿಗಳೆಲ್ಲೂ ಇಲ್ಲ ॥ ॥ ಪ ॥

ರತುನಗರ್ಭದೊಳಗೆ ತಿಳಿ ರತುನಸಮಕ್ಷೇತ್ರಗಳಿಗೆ
ರತುನವೆನ್ನಿ ಯತಿವಂಶ ರತುನ ಮಧ್ವಮುನಿ ಮಾಡಿದ ॥ ॥ 1 ॥

ಪದಜೀವನ್ಥರಿಗದೆ ಪಾಪಜನರು ಕೃಷ್ಣರಾಯನ
ಪಾದವ ನೋಡಿ ನಿತ್ಯ ಸಾಧನೆ ಮನ ಮಾಡಿರಯ್ಯಾ ॥ ॥ 2

ಏಳು ಒಂದು ಮರದ ಲೋಕರಮಿನೆ ಸದನವೆನ್ನಿ
ಪೇಳಲೇನು ಅವರೆ ಇಲ್ಲಿ ಊಳಿಗವ ಮಾಡುತಿಪ್ಪರು ॥ ॥ 3 ॥

ಮೇರುಪರ್ವತ ತುಲ್ಯವಿದೆ ವಾರಿಜನೆ ಮಧ್ವರಾಯ
ಈ ರಜತಪೀಠವೆ ಮಂದಿರ ಶತಕೋಟಿ ಎನ್ನಿ ॥ ॥ 4 ॥

ಮೆರೆವ ಮಧ್ವತೀರ್ಥ ಬಾಹಿರ ವರುಣ ಉದಕವೆನ್ನಿ ಇಲ್ಲಿ
ಚರಿಸುವಂಥ ಸುಗುಣ ತೃಣಾದ್ಯರು ಮುಕುತಿಯೋಗ್ಯರಹುದು ॥ ॥ 5 ॥

ಉಡುಪಿಯಾತ್ರೆ ಮಾಡಿದವನು ಪೊಡವಿ ತುಂಬ ಯಾತ್ರೆ
ಬಿಡದೆ ಚರಿಸಿದವನೆ ಎಂದು ವ್ಯಾಢನು ಇಲ್ಲಿ ಸಾರುತಿಪ್ಪ ॥ ॥ 6 ॥

ಉಬ್ಬಿ ಸರ್ವ ಇಂದ್ರಿಯಗಳ ಹಬ್ಬವಾಗಿ ಸುಪ್ರವಕ
ಊರ್ವಿಯೊಳಗೆ ಉಡುಪಿಯಾತ್ರೆ ಅಬ್ಬದಲೆ ದೊರಕದಯ್ಯ ॥ ॥ 7 ॥

ಲಿಂಗದೇಹ ಬಂಗವಾಗಿ ಹಿಂಗಿ ಪೋಗುವುದಕೆ ಇದು
ಅಂಗವಲ್ಲದೆ ಬೇರೆ ಇಲ್ಲ ರಂಗ ಸುಲಭ ಸಾಧ್ಯವಾಗ ॥ ॥ 8 ॥

ನೂರಕಲ್ಪ ಧರ್ಮ ಮಾರನಯ್ಯ ವಿಜಯ ವಿಠಲನ
ಪ್ರೇರಣೆಯಾಗಿ ಉಡುಪಿಗೊಂದು ನಾರಿ ತಂದು ಕೊಡುವ ॥ ॥ 6 ॥

–8–

ರಾಗ : ರೇಗುಪ್ತಿ ಆಟತಾಳ

ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ
ಫುಲ್ಲಲೋಚನ ನೀನಿದ್ದಲ್ಲಿ ಸೇರಿಸೆನ್ನ ॥ ॥ ಪ ॥

ಮರಣವನೊಲ್ಲೆ ಜನನವನೊಲ್ಲೆ ।
ದುರಿತ ಸಂಸಾರದ ಕೋಟಲೆಯ ನಾನೊಲ್ಲೆ ॥
ಕರುಣದಿ ಕರುಗಳ ಕಾಯುವ ಗೋವಳ ನಿನ್ನ ।
ಚರಣ ಕಮಲದ ಸ್ಮರಣೆಯೊಳಿರಿಸೆನ್ನ ॥ ॥ 1 ॥

ಬೆಂದ ಸಂಸಾರೆಂಬೊ ಬೇನೆ ಮಧ್ಯದಲಿ ನೊಂದೆ
ನಾ ಬಹಳ ಕರಕರೆಯಲ್ಲಿ ॥
ನಂದ ಗೋಪನಕಂದ ವೃಂದಾವನ ಪ್ರಿಯ ।
ಎಂದೆಂದು ನಿನ್ನ ಸ್ಮರಣೆಯೊಳಿರಿಸೆನ್ನ ॥ ॥ 2 ॥

ಪುತ್ರ ಮಿತ್ರ ಕಳತ್ರ ಬಂಧುಗಳೆಂಬ ।
ಕತ್ತಲೆಯೊಳು ಸಿಲುಕಿ ಕಡು ನೊಂದೆನಲ್ಲ ॥
ಮುಕ್ತಿದಾಯಕ ಉಡುಪಿಯ ಕೃಷ್ಣರಾಯ ।
ಭಕ್ತವತ್ಸಲ ಶ್ರೀ ಪುರಂದರ ವಿಠಲ ॥ 3 ॥

–9–

ರಾಗ . ಅರಭಿ – ಏಕತಾಳ

**ಈ ಮುದ್ದುಕೃಷ್ಣನ ಈ ಕ್ಷಣದ ಸುಖವೆ ಸಾಕು** ॥ ಪ ॥

ಶ್ರೀಮಧ್ವಮುನಿಯ ಮನದೈವ ಉಡುಪಿನ ಕೃಷ್ಣನ ॥ ಅ.ಪ ॥

ಚೆಲುವ ಚರಣದ್ವಂದ್ವ ಜಂಘೆ ಜಾನೋರುಕಟಿ
ವಳಿಪಂಕ್ತಿ ಜಠರವಕ್ಷ ಕಂಬುಕಂದರದಿ
ನಳಿತೋಳು ಮುದ್ದು ಮುಖ ನಯನನಾಸಿಕ ಕರ್ಣ
ಸುಳಿಗುರುಳು ಪುಸ್ತಕದ ನಳಿನನಾಭನ ನೊಬಗು ॥ ॥ 1 ॥

ಕಿರುಗೆಜ್ಜೆ ಕಡೆಪೆಂಡೆ ಗಂಟೆ ಕಟಿಸೂತ್ರ
ವರಹಾರ ಪದಕ ಶ್ರೀವತ್ಸ ಕೌಸ್ತುಭರತ್ನ
ಉರುಮುದ್ರೆ ಕಂಕಣಾಂಗದ ಕುಂಡಲಪ್ರಭೆಯು
ಸಿರಿನಾಮ ಮಕುಟನಾಸಿಕದ ವರಮಣಿಯು ॥ ॥ 2 ॥

ಸಕಲ ದೇವೋತ್ತಮನೆ ಸರ್ವಗುಣ ಪೂರ್ಣನ
ಅಕಳಂಕ ಅಖಿಳಾಗಮಸ್ತುತನೆ ಅಪ್ರಾಕೃತನೆ
ಅಖಿಳ ಜೀವೋತ್ತಮರ ಭಿನ್ನ ಹಯವದನನ
ಮುಕುಟ ಕಡೆಗೋಲು ನೇಣುಗಳ ಪಿಡಿದಿಪ್ಪನ ॥ ॥ 3 ॥

## –10–

ರಾಗ , ಕಾಂಬೋದಿ — ಅಟತಾಳ

ಈರೇಳು ಲೋಕದೊಳಗೆ ಇವನಿಗೆಣೆ ಗಾಣೆ ಗೋವಿಂದರಾಯನಿಗೆ
ಮಾರನ್ನ ಪೆತ್ತ ಮನೋಹರ ಮೂರುತಿ ಗೋವಿಂದರಾಯನಿಗೆ ॥ ಪ ॥

ನೀಲ ನೀರದನಿಭ ನಿರ್ಮಲಕಾಯ ಗೋವಿಂದರಾಯನಿಗೆ
ಪಾಲನಾಗರದಲ್ಲಿ ಪವಡಿಸಿ ಪಾಲಿಪ ಗೋವಿಂದರಾಯನಿಗೆ ॥ ॥ 1 ॥

ಮತ್ಸ್ಯಕೂರ್ಮವರಾಹ ನಾರಸಿಂಹ ವಾಮನ ಗೋವಿಂದರಾಯನಿಗೆ
ಕುತ್ಸಿತರಾಯರಕೊಂದ ಕೊಡಲಿಯ ಗೋವಿಂದರಾಯನಿಗೆ ॥ ॥ 2 ॥

ರಘುಕುಲ ಯದುಕುಲ ಬುದ್ಧಕಲ್ಕಿಯಾದ ಗೋವಿಂದರಾಯನಿಗೆ
ನೊಗಸು ನುಡಿಗ ಮೆಚ್ಚಿ ಶೋಕವ ಕಳೆವ ಶ್ರೀಗೋವಿಂದರಾಯನಿಗೆ ॥ 3 ॥

ಕಡೆಗೋಲು ಪಿಡಿದು ನಮ್ಮುಡುಪಿಲಿ ನೆಲೆಸಿದ ಗೋವಿಂದರಾಯನಿಗೆ
ಬಡನಡುವಿನ ಭಾವಕಿಯರೊಡನಾಡುವ ಗೋವಿಂದರಾಯನಿಗೆ ॥ ॥ 4 ॥

ವರ್ಣಿಸಿ ಪೊಗಳುವ ವಾದಿರಾಜಗೊಲಿದ ಗೋವಿಂದರಾಯನಿಗೆ
ಚಿನ್ನದ ಚೆಲುವನೆ ಜಯ ಹಯವದನ ಶ್ರೀ ಗೋವಿಂದರಾಯನಿಗೆ ॥ 5 ॥

-11-

ರಾಗ : ಕಲ್ಯಾಣಿ – ಝಂಪೆತಾಳ

ಈ ಸೊಬಗು ಇನ್ನಾವ ಕ್ಷೇತ್ರದಲಿ ನಾಕಾಣೆ ।
ಇಲ್ಲಿ ವಾಸುದೇವ ಮುನಿಯಿದ್ದ ಕಾರಣ ।। ॥ ಪ ॥

ರಾಜಧಾನಿಯ ನೋಡೆ ಇಂದ್ರ ಬವನಕೆ ಮೇಲು ।
ತೇಜದಲಿ ನೋಡೆ ಸೂರ್ಯನವೆ ಸೋಲು ।।
ಪೂಜೆಯಲಿ ನೋಡೆ ಸರ್ವಧರಣಿಗೆ ಮೇಲು ।
ಭೋಜನದಲಿ ನೋಡೆ ಅಮೃತಕೆ ಮೇಲು ।। ॥ 1 ॥

ಉತ್ಸಾಹದಲಿ ನೋಡೆ ನಹಿಪ್ರತಿ ನಹಿಪ್ರತಿ ।
ಸತ್ಸಂಗತಿಯ ನೋಡೆ ಬುಧಸಂಗತಿ ।।
ಸಚ್ಚರಿತೆಯ ನೋಡ ಶುದ್ಧ ಸತ್ವದ ನೀತಿ ।
ಮತ್ಸರ ಮರೆದು ನೋಡೆ ಇಲ್ಲಿ ಮುಕುತಿ ।। ॥ 2 ॥

ಓಲಗದಲಿ ನೋಡೆ ಸತ್ಯಲೋಕಕೆ ಸಮ ।
ಪೇಳುವ ಕೀರ್ತನೆ ನೋಡ ವೇದಸ್ತೋಮ ।।
ಬಾಲ ಉಡುಪಿಯ ಕೃಷ್ಣ ವಿಜಯವಿಠಲರಾಯನ ।
ತಿಳಿದ ಮಾನವನಿಗೆ ಫಲವು ನಿಷ್ಕಾಮ ।। ॥ 3 ॥

-12-

ರಾಗ : ಆನಂದಭೈರವಿ – ಆದಿತಾಳ

ಉಡುಪಿಕೃಷ್ಣ ಪೊಡವಿಗೊಡೆಯ
ಬಿಡದೆ ನಿನ್ನ ಅಡಿಗೆರಗುವೆ ।। ॥ ಪ ॥
ಕಡಲ ಶಯನ ಬಡವರನ್ನು ।

ಬಿಡದೆ ಸಲಹೊ ವೃಢನ ಸಖನೆ ।। ॥ಅ ಪ॥

ನಾರಿ ಜನರ ಸೀರೆ ಸೆಳೆದು ।
ಚೋರತನದಿ ಮರವನೇರಿ ।।
ಕ್ಷೀರವನ್ನೇ ಸೂರೆಗೈದ ।
ಮಾರಜನಕ ಮೋಹನಾಂಗ ।। ॥ 1 ॥

ಗೋಪಿ ಮನೆಯು ಬೆಣ್ಣೆ ಕದ್ದು ।
ಕಾಣದಂತೆ ಪೋದೆಯಲ್ಲೋ ।।
ಮಾಯಗಾರ ಕೃಷ್ಣನೀ ಮರುಳುಮಾಡಿ ಪೋದೆಯಲ್ಲೋ ।। ॥ 2 ॥

ಅಷ್ಟಮಠದ ಯತಿಗಳಿಂದ
ಇಷ್ಟಪೂಜೆ ಗೊಳುವರಾಯು
ಇಷ್ಟಾರ್ಥಗಳನು ಕೊಟ್ಟು ।
ರಕ್ಷಿಸೊ ಹಯವದನ ಕೃಷ್ಣ ।। ॥ 4 ॥

## -13-

ರಾಗ ಬೇಹಾಗ್ - ಆದಿತಾಳ

ಉಡುಪಿಯು ಕೃಷ್ಣನ ಸಡಗರ ನೋಡುವ
ನಡಿಯೆ ನಾರೀಮಣಿ ।। । ಪ ।

ಪೊಡವಿಗೆ ಒಡೆಯನು ಮಡುವಣ ಕಡಲಿನ ।
ದಡದಲಿ ನಲೆಸಿರುವ ಚೆಲುವನಿವ ।। । ಅ ।

ಅಲವಬೋಧ ಮಾನಿಗಳು ಪ್ರೀತಿಲಿ ತನ್ನ ।
ಬಲದಲಿ ನಿಲಿಸಿರುವ ಚೆಲುವನಿವ ।।
ಹಲವು ಪೂಜೆಗಳ ನಲಿನುವ ಯತಿಗಳ ।
ಒಳಗೆ ಹೊರಗೆ ಇರುವ ಚೆಲುವನಿವ ।। । ೧ ।

ನವ ನವ ಪೂಜೆಯು ವಿವಿಧಾಲಂಕಾರದಿ ।
ತಾ ಮಾಡಿಸಿಕೊಳುವ ಚೆಲುವನಿವ ।।

ಭುವನಮೋಹನ ರೂಪವು ನೋಡುವವರಿಗೆ ।
ವಿವರದಿ ಕಾಣಿಸುವ ಚೆಲುವನಿವ ॥ ।೨।

ಶ್ರೀ ಕಮಲೇಶವಿಠಲರಾಯನು ತಾ ।
ಬೇಕಾಗಿಲ್ಲಿರುವ ಚೆಲುವನಿವ ॥
ಈ ಕಲಿಯುಗದೊಳು ಇದೇ ವೈಕುಂಠವು
ಕಾಮಿತ ಫಲ ಕೊಡುವ ಚೆಲುವನಿವ ।೩।

## -14-

ರಾಗ · ಮೋಹನ – ಆದಿತಾಳ

ಉಡುಪಿಯಕೃಷ್ಣ ಸಕಲ ಜಗದೀಶ ।
ಬಿಡದೆನ್ನ ಸಲಹೊ ಮಧ್ವಹೃದಯವಾಸ ॥ ॥ 1 ॥

ವಿಕಸಿತ ನಯನ ಜಲಜಾನನ
ಪ್ರಕಟಿತ ತಾತೆ ದಿತಿಜಕುಲ ದಮನ ॥ ॥ 2 ॥

ತ್ರಿಕರಣ ವರಿಯ ತ್ರಿವಿಧತಾಪ ಶಮನ
ಸುಕುಮಾರರೂಪ ಮೋಹನ ರಮಾರಮಣ ॥ ॥ 3 ॥

ಎನೆವಕಿರುಡೊಳ್ಳಿನ ಶುಭಾಕಾರ ಗಂಡ
ಪಸುಳೆಯ ಭಾಷದಿ ಮೆರೆವ ಪ್ರಪಂಡ ॥ ॥ 4 ॥

ಶಶಿಸಮವದನ ಕುಂಡಲಶೋಭಿಗಂಡ
ಅಸುರ ಸಂಹಾರ ದೋರ್ಧೃತಪಾಶದಂಡ ॥ ॥ 5 ॥

ಶ್ರುತಿಯರು ಸೇವೆಯದರು ಬಿಡದೆ ಬಣ್ಣಿಸುವರು
ಪ್ರತಿಯಿಲ್ಲದದುಭುತ ಮಹಿಮಾನುಭಾವ ॥ । 6 ।

ಯತಿಕುಲ ಸೇವ್ಯ ಹಯವದನ ದೇಹ
ಪತಿಕರಿಸೊ ನಮ್ಮ ಭವವನದಾವ ॥ । 7 ।

–15–

ರಾಗ ಸಾದನಾಮಕ್ರಿಯೆ – ಆಟತಾಳ

ಉಡುಪಿನ ರಂಗ ಕಲ್ಲಕಂಬದಿಂದೊಡೆದ ನರಸಿಂಹ
ಬಿಡದೆಮ್ಮ ಸಲಹೊ ಕೈಪಿಡಿ ಇನ್ನೇಕೆ ತೆಡವೊ ‖ ‖ ಪ ‖

ಕರೆಯುದ ಮುನ್ನ ಬಂದೆ ಖಳನಿದಿರಲಿ ನಿಂದೆ
ಅರಿಯುದರ ಸೀಳ್ದೆ ಅಸಮಾನನಿಸಿ ಬಾಳ್ದೆ ‖ 1 ‖

ಎನಗೆ ನೀನೆ ಬಂಧು ಎಲೆಲೆ ಕರುಣಾಸಿಂಧು
ಧನದಾಸೆಯು ಬಿಡಿಸೊ ಧರ್ಮಮಾರ್ಗದಿ ನಡೆಸೊ ‖ ‖ 2 ‖

ಹಯವದನನಾಗಿ ಹರಿ ನೀ ದೈತ್ಯರ ನೀಗಿ
ನಯದಿ ವೇದವ ತಂದೆ ನಳಿನನಾಭನೇನೆಂಬೆ ‖ ‖ 3 ‖

–16–

ರಾಗ · ಶಂಕರಾಭರಣ – ಆಟತಾಳ

ಉಡುಪಿಯು । ಯಾತ್ರೆಯುಮಾಡಿ ಉಡುಪಿಯು ।। ಪ ।।
ಉಡುಪಿಯಾತ್ರೆಯನ್ನೆ ಮಾಡಿ । ಭಕ್ತಿ । ಮುಡಿಪಿತ್ತು
ಪ್ರಮೋದ ಬೇಡಿ ।। ಅಹಾ । ನಡುದೇಹದೊಳಿಹ । ನಡುನಾಡಿ
ಕಮಲದಿ । ಒಡೆಯ ಶ್ರೀ ಕೃಷ್ಣನ । ದೃಢ ಭಕ್ತಿಯಿಂದ ಭಜಿಸಿ । ಅ ಪ ।

ಆನಂದತೀರ್ಥ ನರಸಿಯೊಳು । ಮೀನಾಗಿ ಬಂದು ಈಸಿ ಹರಿ ।
ಧ್ಯಾನದಿ ಸ್ನಾನ ಪೂರೈಸಿ । ಮತ್ತೆ ಮೌನವೆಂಬಾಸನ ಹಾಸಿ
ಅಹಾ ।। ಮೂರ್ಧ್ನಿ ಲಲಾಟದೊಳ್ । ಗೋಣು ಮಧ್ಯೋದರ
ಸ್ಥಾನಾದಿಯಲಿ ಹರಿ ಧ್ಯಾನ ನಾಮವ ಪಚ್ಚಿ ‖ 1 ‖ ಮಧ್ವಕಿಂಕರ
ನೆಂಬೊದೊಂದು । ಹರಿ । ವಿದ್ವೇಷಿಗಳ ಬಡಿವೊದೊಂದು ।
ಮತ್ತೆ ಸದ್ವೈಷ್ಣವರ ಸೇವೂದೊಂದು । ಇನ್ನು ಬುದ್ಧಿಪೂರ್ವಕ
ಹರಿಪರನೆಂದು ‖ ಅಹಾ ‖ ಶ್ರದ್ಧಾಳುವೆಂದೆನಿಪ ಮುದ್ದು ಮುದ್ರೆಗಳೈದು ।
ತಿದ್ದಿ ವಿಸ್ತರಿಸುತ ಕೃದ್ಧೋಲ್ಕಾದಿಯ ನೆನ ‖ 2 ‖ ಸಂಧ್ಯಾ
ಮೀರಿಹುದು ನೀನೋಡು ಕಾಲ । ಮುಂದಿಹಂದಾಗದೆ ನೀಮಾಡು ।

ಯಾವ 1 ದೊಂದು ಮಂತ್ರಾರ್ದಪ ನೋಡು 1 ಇನ್ನು 1 ಸಂಧ್ಯಾ
ನಾಮಕನ ಕೊಂಡಾಡು 1 ॥ ಅಹಾ ॥ ಚೆಂದದಿ ನಿನ್ನ ಜ್ಞಾನ ಘುಂದು
ಮುಕ್ಕಲು ಬಪ್ಪ 1 ಮಂದೇಹ ದೈತ್ಯರ 1 ಮಂದಿಯು ಕೊಲ್ಲುತ ॥ 3 ॥
ಕಂಬಕ ಕಳೆದು ಶರೀರ 1 ಮಧ್ವ 1 ಮಂಟಪ ಚಿಂತಿಸೋ ಧೀರ 1 ಅದಕೆ
ಎಂಟರ್ಧ ಮತ್ತೊಂದು ದ್ವಾರ 1 ಕಾಯ್ವ 1 ಬಂಟ ಮಾರುತನ ವ್ಯಾಪಾರ ॥
ಅಹಾ ॥ ಎಂಟೆಂಟಾರು ನಾಲ್ಕು ಸ್ತಂಭ ಮಧ್ಯದಿ ಲಕ್ಷ್ಮೀ 1 ಮಂಟಪ ಚಿಂತಿಸಿ 1
ಒಂಟಿಯಾಗೊ ಮನದಿ ॥ 4 ॥ ಕೆಳಮುಖಾಬ್ಜವನೆ ನೀ ನೋಡಿ 1
ಮಂತ್ರ 1 ಮೂಲದಿಂದ ಮೇಲು ಮಾಡಿ 1 ಅಲ್ಲಿ 1 ಇಳೆಯಾಣ್ಮನ
ಚಿಂತೆ ಮಾಡಿ । ಸರ್ವ ಅಲಂಕಾರದಿಂದೊಡಗೂಡಿ ॥ ಅಹಾ ॥ ನೆಲಸಿಹ
ಕೃಷ್ಣನ ಒಲಿಸೆ ಬಕ್ತಿಯಿಂದ 1 ಸ್ಥಲತನ್ನ ಅರಮನೆಯೊಳು ಕೊಟ್ಟು
ನಲಹುವ 1 5 1 ಕಂಬುಚಕ್ರ ಗದಾಧರನ 1 ಪದ 1 ನಂಬುತಲರ್ಘ್ಯ
ಅಚಮನ । ಸರ್ವ । ಸಂಪ್ರದುಡಲಿ ಕೊಟ್ಟು ಅವನ । ಜ್ಞಾನದ್ದಂಬಲಿನೊಳು
ನಿತ್ಯಾಸ್ತವನ । ಅಹಾ ॥ ಇಂಬಿಟ್ಟು ಸ್ತೋತ್ರದಿ 1 ಉಂಬುಡುವೊ ಸರ್ವ
ಬಿಂಬನೊಳಪ್ಪಿಸಿ 1 ಸಂಭ್ರಮದಲ್ಲಿರು ॥ 6 ॥ ಮಧ್ವ ಸರೋವರಸ್ನಾನ 1
ಭಕ್ತಿ 1 ಶುದ್ಧದಿ ಶ್ರೀಕೃಷ್ಣಧ್ಯಾನ 1 ಮಾಡೆ 1 ಹೃದ್ಯನು ಹೃದ್ಯಧಿಷ್ಠಾನ 1
ದಲ್ಲಿ ಸಿದ್ಧಿಸುವನು ಗುಣಪೂರ್ಣ ॥ ಅಹಾ ॥ ಮುದ್ದುಕೃಷ್ಣನು 1
ಗುರು 1 ಗೋವಿಂದ ವಿಠಲನು 1 ಶುದ್ಧನತ್ವಕ್ಕೊಲಿವ 1 ಸಿದ್ಧಕನಕನ
ನೋಡೋ ॥ 7 ॥

## –17–

ರಾಗ ಶ್ರೀರಾಗ – ಅಟತಾಳ

ಉತ್ಸವದಲಾಹ್ನೀಕನ ಕಡು ಜನರು ಕೇಳಿರಯ್ಯ ॥ ಪ ॥

ಅರುಣ ಉದಯುದೊಳೆದ್ದು ಆ ದ್ವಾರಪಾಲಕರು
ಭರದಿ ಘಂಟೆ ಸುವಿಘ್ನ ಮಾಡೆ
ತೆರತೆರದ ಹರಿದಾಸರು ತಾಳ ಮೇಳಗಳಿಂದ
ಪರಿ ಪರಿಯು ಗಾನ ಪಾಡೆ ತ್ವರಿತ ವಾದ್ಯಗಳಿಂದ
ತೆರುವಾಯ ಭೋರಿಡೆ ಮುರಹರನುಪ್ಪವಡಿಸೆ
ತರುಣ ಯತಿಗಳು ಎದ್ದು ಸ್ನಾನ ಜಪಗಳ ಮಾಡಿ
ನಿರುತ ಶಂಖ ಭ್ರಮಣೆ ಮಾಡಿ ನೀಟಾಗಿ
ಒಪ್ಪುತಿಹ ಉಡುಪಿಯು ಶ್ರೀಕೃಷ್ಣನ ॥ ॥ 1 ॥

ಚಂದವುಳ್ಳ ನಿರ್ಮಾಲ್ಯ ಚಾತುರ್ಯದಿ ವಿಸರ್ಜಿಸಿ ಆ –
ನಂದ ಸುತಗಭಿಷೇಕವ
ಚೆಂದದಿಂದಲಿ ಮಾಡಿ ಆ ರಮ್ಯ ಬಾಲ ಉಡಿಗೆ ಶ್ರೀ–
ಗಂಧ ತುಳಸಿ ಮಾಲೆಯನರ್ಪಿಸಿ
ಇಂದಿರೇಶಗೆ ಬೇಗ ಇಂಬಾದ ಹರಿವಾಣದಿ
ಇಂದು ಘೃತ ನೆನೆ ಕಡಲೆಯು
ಶುದ್ಧಾದ ಪಾಲ್ಗೊಸರು ಶುಂಠಿ ಸಕ್ಕರಲಡ್ಡಿಗೆ
ತಂದ ನೈವೇದ್ಯವ ಸವಿದು ತಾ ಪೂಜೆ ಮಾಡಿಸಿಕೊಂಡು ll ॥ 2 ॥

ಪದ್ಮನಾಭಗೆ ಬೇಗ ಪುರುಷಸೂಕ್ತದಭಿಷೇಕ
ಮುದದಿಂದ ಮಾಡಿದ ಬಳಿಕ
ವಿಧಿಯ ಪೂರ್ವಕವಾಗಿ ಅಗಿಲು ಗಂಧ ತುಳಿಸಿಮಾಲೆ
ಅಧಿಕವಾಗಿ ಸಮರ್ಪಿಸಿ ಒದ –
ಗಿದ್ದ ಶುಂಠಿ ಬೆಲ್ಲ ಒಳಿತಾದ ಅನ್ನನೂಪ
ದಧಿ ಕ್ಷೀರ ಕದಳಿಫಲವು ಮುರಮರ್ಧನನು
ಚೆಲುವ ತಾ ಹೊಸ ಪೂಜೆಯುಕೊಂಬ ತಪನಂತ –
ರದಲಿ ಪ್ರೀತಿಗೆಂಯ ತಾ ಗಣೆಯಕಟ್ಟಿಸಿಕೊಂಬ ll ॥ 3 ॥

ಗುರುರಾಯ ಪುರಾಣವನು ಗುಪಿತಾರ್ಥದಲಿ ಕೇಳಿ
ಹರಿಯುಮಂದಿರಕೆ ಪೋಗಿ ತರುವಾಯ ಘೃತ
ಕ್ಷೀರ ತಂದು ದಧಿ ದಿವ್ಯ ಮಧು ಸಕ್ಕರ ಸೀಯಾಳವು ಇಂ
ದಿರೇಶಗೆ ಬೇಗ ಶಿರವ ಮೇಲ-
ಭಿಷೇಕ ಮುದದಿಂದ ಮಾಡಿದ ಬಳಿಕ
ತಿರುಗಿ ನೈವೇದ್ಯವನು ತೀವ್ರದಿಂದಲೆ ಸ –
ಮರ್ಪಿಸಿ ಚೆಲುವ ಮಂಗಳಾರತಿಯಿಂದ
ಪಂಚಾಮೃತದ ಪೂಜೆಗೊಂಬ ll । 4 ।

ಜಲಜನಾಬಗೆ ಉಷ್ಣಜಲವ ತಂಪ್ಹದ ಮಾಡಿ
ಲಲಿತವಾಗಿ ಎರೆಯುತ
ಒಳಿತಾದ ಹೆಸರ್ಹಿಟ್ಟಿನಲಿ ವರಸಿ ಮೈಯನೆ
ತೊಳೆದು ಸುಲಭಗೆ ಪಾಲನುಣಿಸಿ ಬಳಿಕ
ಬಾಲ ಉಡಿಗೆಯಿಟ್ಟು ಬಹು ನೈವೇದ್ಯವನರ್ಪಿಸಿ

ಚೆಲುವ ಉದ್ವಾರ್ಚನೆ ಪೂಜೆ
ಚೆಂದಾಗಿ ಮಾಡಿಸಿಕೊಂಬ ॥ ॥ 5 ॥

ಮಧ್ವಸರೋವರಜಲಪ್ರ ಹೊಳೆವ ಚಿನ್ನಕಲಶದಲಿ
ಶುದ್ಧದಲಿ ಶೋಧಿಸಿ ತುಂಬಿಸಿ
ಬದ್ಧ ಘಂಟೆನಾದದಲಿ ಬಹುಬೇಗದಲಿ
ಬಂದು ಸನ್ನಿಧಿಯಲಿ ಪೂಜಿಸಿರಿಸಿ
ವಿಧುರಥನೆ ಶಂಕರಘನೆ ಪುರುಷಸೂಕ್ತದಭಿಷೇಕ
ಮುದದಿಂದ ಮಾಡಿದ ಬಳಿಕ ಸಜ್ಜಿ ಘೃತ
ದೋಸೆ ಬೆಣ್ಣೆ ನಾರು ಸ್ವಪೇದ್ಯವ ಸವಿದು ಚೆಲುವ
ಮಂಗಳಾರತಿಯಿಂದ ಮುದದಿ ತೀರ್ದಪೂಜೆಗೊಂಬ ॥ ॥ 6 ॥

ಉರುಪದಕಾಭರಣಂಗಳು ಉನ್ನಂತ ತೋಳ್‌ಬಂದಿ
ಕರಮುದ್ರೆ ಕಂಕಣಗಳು
ಚರಣಾರವಿಂದಗಳಿಗೆ ಜಾರು ಚಿನ್ನದ್ದಾವಿಗ
ಕಿರುಗೆಜ್ಜೆ ಕಾಲಲಂದುಗೆ
ವರಪೀತಾಂಬರ ಕಟಿಗೆ ವಡ್ಯಾಣ ನೇವಳ ಇದ್ದು
ಸಿರುತ ಸುಪರ್ಣದ ಕವಚವು
ಕೊರಳ ಕೌಸ್ತುಭಹಾರ ಕೋಮಲ ಸುವರ್ಣಕಾಂಡಲ
ಸಿರಿಮೂಗುತಿ ಸಣ್ಣನಾಮಶಿರದಜಾವಳಜಡೆ ಕಡಗೋಲು ನೇಣುಸಹಿತ ॥7॥

ಕರದಲ್ಲಿ ಪಿಡಿದಿಪ್ಪಗೆ ಒಡೆ ಸುಕುಸುಂಡೆ ಹಪ್ಪಳ
ಒಡೆಯುಗೋದನ ನೈವೇದ್ಯ
ಒಳಿತಾದ ಅನ್ನ ಸೂಪ-ತಡೆಯದಾಲಂಕಾರ ಪೂಜೆತಾಕೊಂಡು
ತೀವ್ರ ಪೂಜೆ ನಡಗರದಿಂದ ಮಾಡಿ ಪರಮಸಂಭ್ರಮದಲೊಪ್ಪುವ
ಪರಿಮಳದ ಗಂಧ ತುಳಸಿ ಪರಮಾತ್ಮಗರ್ಪಿಸಿ
ಉರದಿ ಧೂಪ ದೀಪವೆತ್ತಿ
ತರತರದ ಪಚ್ಚಡಿಗಳು ತಳಿಲು ಸೀಕರಣೆಯು
ಕರೆದ ತುಪ್ಪದ ಅಪೂಪವು ಚಿತ್ರಾನ್ನದಧ್ಯನ್ನ ಪಂಚಕಜ್ಜಾಯ
ಕಲಸೋಗರ ಬಿಡದೆ ಪರಮಾನ್ನಗಳನ್ನು ಸೊಗಸುಳ್ಳ
ಕ್ಷೀರದಧಿ ಶುಂಠಿ ನಿಂಬೆರಸ ತಕ್ರ
ಜಗದೇಕ ಸವಿದ ಪರಿಯ ॥ ॥ 8 ॥

ಬಗೆ ಬಗೆಯ ಮಂಗಳಾರತಿ ಬಾರಿ ಬಾರಿಗೆ ಮಾಡಿ ಚಾ –

ಪುರ ವರ್ಣಗಳನೆಯು ನಗುಮುಖದ ಕೃಷ್ಣ –
ಸಂಪ್ರಿಗೆ ಷೋಡಶ ಪೂಜೆಯುಮಾಡಿ
ಮುಗಿಸಿ ಗುರುರಾಯು ಬರಲು
ಹನುಮಂತ ದೇವರಿಗ ಪನಸಾದ ಬಕ್ಷಭೋಜ್ಯ
ಅನುದಿನದಲರ್ಪಿಸಿ ಪೂಜಿಸಿ
ಮುನಿಮಧ್ವರಾಯರಿಗೆ ಮುದದಿಂದಲರ್ಪಿಸಿ ॥ ॥ 9 ॥

ಘನ ಸಿಂಹಾಸನಕೆ ಪೋಗಿ
ಅಣಿಯಾದ ಫಲ ನೈವೇದ್ಯ
ಆ ವ್ಯಾಸಗರ್ಪಿಸಿ ಒಂದನೆ ಮಂಗಳಾರತಿಯತ್ತಿ
ಜನಕೆ ತೀರ್ಥಪ್ರಸಾದ ಜಾಗ್ರತೆಯಿಂದಲೆಮಾಡಿ ಭೋ –
ಜನವ ಮಾಡಿಸಿ ಈರೇಳು ಜನರ ಕೀರ್ತಿಯೊಳೆಸೆವ
ಆ ಭಾಗವತರು ತಾವು ಆ ಬೆಳ್ಳಿ ಕೋಲುಗಳನ
ಬೇಗದಲಿ ಪಿಡಿದು ನಿಂತು
ಆರು ಹೆಡಿಗೆಯು ಅರಳು ಆ ಅಚ್ಚು ಬಲ್ಲವು
ಆ ಕಾಲದಲರ್ಪಿಸಿ ಪೂಜಿಸಿ ಕರಣದಲಿ ನೋಡಿ ನಗುವ ॥ ॥ 10 ॥

ಪುಟ್ಟ ಕೃಷ್ಣರಾಯರಿಗೆ ಪೊನ್ನ ಕವಚವ ತೊಡಿಸಿ
ಇಟ್ಟ ರನ್ನದ ಕಿರೀಟವು
ದಿಟ್ಟಾದ ಪದಕಂಗಳು ದಿವ್ಯ ಮುತ್ತಿನ ಸರ
ಕಟ್ಟಿದ ಪೂಮಾಲೆ ಎಸೆಯೆ
ಶ್ರೇಷ್ಠವಾದ ಧೂಪದೀಪ ಶ್ರೀಪತಿಗೆ ದೋಸ ಬೆಣ್ಣೆ
ಗಟ್ಟಿರುಳಿ ನೈವೇದ್ಯವು ಕಟಕಟನೆ
ಶುಂಠಿ ಕಷಾಯುಂಡು ಬಾಯಿತೊಳೆದು
ತಟ್ಟನೆ ರಾತ್ರಿ ಪೂಜೆಯುಗೊಂಡು ತಾವಲ್ಲಕ್ಕಿಯೇರಿ ಬರುವ ॥ 11 ॥

ಓಲಗದ ಮಂಟಪಕ ವೈಭೋಗದಲಿ ಬಂದು ಉ –
ಯ್ಯಾಲಯಲಿ ಮುದದಿ ಕುಳಿತು
ಬಹಳ ಪಾನಕ ಅರಳು ಬಹು ಕೊಬರಿ ಚೂರುಗಳು ಆ
ಕಾಲದಲಿ ನೂಸಿ ಪೂಜಿಸಿ ಕರುಣದಲಿ ನೋಡಿನಗುವ ॥ ॥ 12 ॥

ಧೀರನಿಗೆ ಚತುರ್ವೇದ ದಿವ್ಯಶಾಸ್ತ್ರ
ಪುರಾಣ ಚೆಲುವಗಷ್ಟಕ ಗೀತವು
ಭೇರಿ ಮೌಳಿವಾದ್ಯ ಮೌಳಿ ಚಕ್ರವಾದ್ಯ

ತಾರತಮ್ಯದ ಸರ್ವ ವಾದ್ಯಗಳಿಸಿಯು
ತಾರಿ ಸೇವೆಯುಮಾಡಿ ಸ್ವಾಮಿ ವೀಳ್ಯ ಮಂತ್ರಾಕ್ಷತೆ ಕಾರುಣ್ಯದಲಿ
ಬೆರೆಸಿ ಮಾರಜನಕಗೆ ಏಕಾಂತ ಸೇವೆಯುಮಾಡಿ ನವ
ಮಾರಜನಕ ಹಂಸಪೂಜೆಯು ಜಾಗ್ರತೆಯಲಿ ನೋಡಿನಗುವ ।। ।। 13 ।।

ಹಡಗಿನಿಂದಲಿ ಬಂದು ಕಡಲ ತಡಿಯಲಿ ನಿಂದು
ಬಿಡದೆ ಯತಿಗಳ ಕೈಯ ಬಿಂಕದ ಪೂಜೆಗೊಂಬ
ಆದಿಕೃಷ್ಣನ ಆಶ್ಲೋಕವನು ಆಧಾರದಲಿ
ಓದಿ ವಿನೋದವಲಿ ಪರಿವ ಜನರಿಗೆ
ಆದಿ ವ್ಯಾಧಿಗಳಟ್ಟಿ ಬಹು ಭಾಗ್ಯಗಳಕೊಡುವ
ಮಾಧವನು ಕೃಪೆಯಿಂದಲಿ
ವಾದಿರಾಜರಿಗೊಲಿದು ವಚನ ಶುದ್ಧೋಕ್ತದಲಿ ಹೇಳುವಜನರಿಗೆ
ಬರುವ ದುರಿತವಕಳೆದು ಮೇಲಾಗಿ ರಕ್ಷಿಸಿಕೊಂಬ ಹಯವದನ ।। 14 ।।

## –18–

ರಾಗ ; ಭೂಪಾಳಿ – ಝಂಪೆತಾಳ

ಉಪ್ಪವಡಿಸಯ್ಯ ಉಡುಪಿನ ಕೃಷ್ಣ ಚೆಲ್ವಕಂ –
ದರ್ಪನಪ್ಪನೆ ಕಣ್ತೆರೆ ।। ।। ಪ ।।

ದರ್ಪನಂಗದಲಿ ರುಕ್ಮಿಣಿ ಸತ್ಯಭಾಮೆಯರ
ಅಪ್ಪಿಕೊಂಡಿಪ್ಪ ಬಲು ಸುಪ್ರಸಿದ್ಧ
ಅಪ್ರತಿಮ ಗುಣಗಣಾಂಬುಧಿಯೆ ಕರುಣಾನಿಧಿಯೆ
ಸುಪ್ರೇಮದಿಂದ ನೋಡಾದೇವ ।। ।। 1 ।।

ದೇಹಿಗಳ ನಿದ್ರೆಯನು ತಿಳಿಹಿಸುವರಾರು ನಿ–
ರ್ವಾಹಕನು ನೀನು ನಿದ್ರೆಯ ಕೈಕೊಳೆ
ಆಹುತಿಗಳನುವಾದ ಅನಲಮುಖದಲಿ ನಿನಗೆ
ಶ್ರೀಹರಿಯೆ ದುರಿತಾರಿಯೆ ದೇವ ।। ।। 2 ।।

ನಿದ್ರೆಯಂ ತೊರೆದು ಸಿದ್ಧಾಸನದಿ ಕುಳ್ಳಿರ್ದು
ಸಿದ್ಧರೆಲ್ಲರು ತಮ್ಮ ಹೃದಯಕಮಲ

ಸಪ್ತಾಶ್ವನು ಬೆಳಗಿ ನಿನ್ನನೆಚ್ಚರಿಸುತ್ತೈದಾರೆ
ಮುದ್ದುಮೊಗವನು ತೋರಿಸಾ ದೇವ ॥ ॥ 3 ॥

ಇನನುದಯಗಿರಿ ಶಿರವೇರಿ ಕುಳಿತು ಪದ್ಮಗಳ
ಅನಯನ ಸೇಮದಿ ಪಿಡಿದು ತಮವೋಡಿಸ
ಅನುರಾಗವಂ ತುಂಬಿ ಕರೆಯುಕಳುಹಿದ ನಿನ್ನ
ಮನೆಯ ಬಾಗಿಲೊಳರಸುತ್ತ ದೇವ ॥ ॥ 4 ॥

ಕಮಲಕೊಬ್ಬಿತು ಸೂರ್ಯನ ಲವರ್ಣಯಿಂ ಪೊತ್ತ
ಕ್ರಮದಿಂದ ನಿನ್ನ ಪೂರ್ವಜನೋಮನೂ
ಭ್ರಮೆಗೊಂಡವನ ಪರಿವಾರಕಾಯಿತೆನಸೋಲ
ಸುಮುಖೀಚಂದ್ರನೆ ಬೆಳಗಿಸಾ ದೇವ ॥ ॥ 5 ॥

ಅಮಲಜಲದಲ್ಲಿ ಮಜ್ಜನವ ಮಾಡುವೆನೆಂದು
ಕ್ರಮದಿಂದ ತೀರ್ಥಗಳು ಕರದು ನಿನ್ನ
ರಮಣೀಯ ಮೂರುತಿಯ ಮನದಲ್ಲಿ ನಿಲಿಸುವ
ಶ್ರಮದ ಸಾರ್ಥಕ ಮಾಡೂ ದೇವ ॥ ॥ 6 ॥

ಅತಿಪ್ರೀತ ಹರುಷದಿಂ ಪುಳಕ ಶೋಭಿತರಾಗಿ
ಪ್ರತಿಕ್ಷಣದಿ ನಿನ್ನನೇ ನೆನದು ಸಸದು
ವ್ರತದಿಂದ ಪೇಳುವ ಶ್ರುತಿ ಪುರಾಣದೊಳಿಪ್ಪ
ಸ್ತುತಿಯನಾಲೈಸಿ ಕೇಳೊ ದೇವ ॥ ॥ 7 ॥

ತನುವ ರಂಜಿಸಿ ಶಂಖ ಚಕ್ರೋರ್ಧ್ವಪುಂಡ್ರದಿಂ
ಪ್ರಣವವಂ ಪೇಳಿ ಮಂತ್ರಿತವಾರಿಯ
ಘನ ಮಹಿಮ ನಿನ್ನ ಹಸ್ತದಲಿ ತ –
ರ್ಪಣ ಮಾಡಲನುವಾದರಯ್ಯಾ ದೇವ ॥ ॥ 8 ॥

ಎನಲುಪ್ಪವಡಿಸಿ ಶ್ರೀಕೃಷ್ಣ ಹಯವದನ ತಂ –
ಪಿನ ನಾಗಭೋಗ ವಿಸ್ತರದಿ ಕುಳಿತು
ವನಜಸಂಭವ ಸಹಿತ ವಿಬುಧರೊಡ್ಡೋಲಗದಿ
ಮುನಿಗಳರ್ಚಿಸಿ ಮೆಚ್ಚಿನ ದೇವ ॥ ॥ 9 ॥

ರಾಗ ಪೂರ್ವಿ - ಅಟತಾಳ

ಎಚ್ಚರಾದರು ದೇವಗಣರಿಂದು । ಸಮ್ಮ ।
ಲಕ್ಷ್ಮೀರಮಣಕೃಷ್ಣ ರಥವನೇರುವನೆಂದು ॥ ॥ ಪ ॥

ಶಿಂಶುಮಾರ ಚಕ್ರ । ದಂಶ ಮಕರ ತಿ ।
ಗ್ಮಾಂಶು ಸಂಕ್ರಮಿಸುವ ಸಮಯದಲಿ ॥
ಕಂಸಮರ್ದನ ಯದು ವಂಶಾಬ್ದಿ ಚಂದ್ರ ವಿ
ಹಾಂಶುಗಮನನಾಗಿ ವೀಧಿಗೆ ಬಹನೆಂದು ॥ ॥ 1 ॥

ಕಂದನ ಸಂಭ್ರಮ ತಂದೆಗೆ ಸುಖಕರ ।
ವೆಂದು ಪೇಳುವ ಮಾತ ನಿಜವದೋರಿ ॥
ಮಂದರಧರ ಮನ್ಮಥನ ಕೇತು ಬೆಳಗುವಾ
ಸಂದದಿ ರಥವೇರುತಿಂದು ಬರುವನೆಂದು ॥ ॥ 2 ॥

ಮೋಕ್ಷದಾಯಕ ಕಮಲಾಕ್ಷಕೃಷ್ಣನ ಕಟಾಕ್ಷ
ಸಂಪಾದಿಪೇಕ್ಷೆಯಲಿ ।
ತ್ರ್ಯಕ್ಷಾದ್ಯಷ್ಟ ಲೋಕಾಧ್ಯಕ್ಷರೆಲ್ಲರು ಕೂಡಿ
ಪಕ್ಷಿವಾಹನನ್ನುಪೇಕ್ಷಿಪ ತವಕದಿ ॥ ॥ 3 ॥

ಹೃದಯ ಕುಮಾರನ ರಥವ ನಡೆಸುತತಿ ।
ರಪರನು ಗೆಲಿಸಿ ಸಾಮ್ರಾಜ್ಯವಿತ್ತ ॥
ಕಥೆಯ ಕೇಳ್ದರ ಮನೋರಥಗಳ । ಕೊಡುವಮ
ನ್ಮಥನ ಜನಕ ಮುಕ್ತಿಪಥವ ತೋರುವನೆಂದು ॥ ॥ 4 ॥

ಸಿದ್ಧಿ ವಿಘ್ನ ಮುಖದೋಷಭೇಕ್ಷಜ ಭಕ್ತಿ ।
ಸಿದ್ಧ ಜನರಿಗೆ ಸಿದ್ಧಿಸುವನೆಂದು ॥
ಮಧ್ವಮುನಿಯು ತಂದಿಲ್ಲಿರಿಸಿ ಪೂಜಿಸಿದಂಥ ।
ಸಿದ್ಧಾಂತ ವೇದ್ಯಾನಿರುದ್ಧನಿಲ್ಲಿರುವನೆಂದು ॥ ॥ 5 ॥

ಧರಣಿಯೊಳಗಿನ ವಿಷ್ಣುಭಕ್ತರ ಸಂಘ
ಸೇರಿ ಸಂತೋಷದಿ ಜಯವೆನಲು ॥

ಪಾರಿವ್ರಾಜರು ಕೂಡಿ ಪರತತ್ವ ನುಡಿಯೆ ನ
ರ್ವಾರಿಯುಸೇರಿ ಸಮಾರೇಡ್ಯ ಬಹಸೆಂದು ॥ ॥ 6 ॥

ಮಾಯಿಜನರ ಮುರಿದೊತ್ತುತ ತತ್ವರ
ನಾಯುನ ಸುಧೆಯು ಸಜ್ಜನರಿಗಿತ್ತು ।।
ಪಾಯುಮುನಿಯು ಪ್ರತಿಷ್ಠೆಯಗೈದು ಪುರುಷಾರ್ಥ ।
ದಾಯುಕ ವೆಂಕಟರಾಯು ನೀತನೆಂದು ।। ॥ 7 ॥

## –20–

ರಾಗ ಕಲ್ಯಾಣಿ – ಆದಿತಾಳ

ಎಲ್ಲಿ ಮಾಯುವಾದನೆ ರಂಗಯ್ಯನು । ಎಲ್ಲಿ ಮಾಯುವಾದನೆ ॥ ಪ ॥
ಎಲ್ಲಿ ಮಾಯುವಾದ ಫುಲ್ಲನಾಭ ಕೃಷ್ಣ ಚೆಲ್ವಗಂಗಳೆಯುರು
ಹುಡುಕ ಹೋಗುವ ಬನ್ನಿ ॥ ಅ ॥

ಮಂದಗಮನೆಯುರೆಲ್ಲ ಕೃಷ್ಣನ್ನ ಕೂಡೆ । ಚೆಂದದಿ ಇದ್ದೆವಲ್ಲ ।।
ಕಂದರ್ಪ ಭಾದೆಗೆ ಗುರಿಯು ಮಾಡಿದೆವಲ್ಲ ।
ಮಂದಮತಿ ನಮಗೆ ಬಂದು ಒದಗಿತಲ್ಲ ॥ ೧ ॥

ಸರಸಿಜಾಕ್ಷಿಯುರು ಕೂಡಿ ಕೃಷ್ಣನ ಕೂಡೆ । ಸರಸವಾಡುತಲಿದ್ದೇವೆ ॥
ಕರಕರೆಗೊಳಿಸಿ ಮನ್ಮದ ಭಾದೆಗೊಪ್ಪಿಸಿ ।
ಚರಣ ಸೇವಕರಾದ ತರಳೆಯುರನು ಬಿಟ್ಟು ।। ೨ ॥

ಭಕ್ತವತ್ಸಲ ದೇವನು ತನ್ನವರನ್ನು । ಅಕ್ಕರದಲಿ ಪೊರೆವನು ।।
ಸಿಕ್ಕದೆ ಹೋಗನು ಹುಡುಕುತ ಹೋಗುವ ।
ಅಕ್ಕಯ್ಯ ಬನ್ನಿರೆ ಉಡುಪಿ ಶ್ರೀಕೃಷ್ಣನು ॥ ೩ ॥

## –21–

ರಾಗ : ರೇಗುಪ್ತಿ – ಅಟತಾಳ

ಎಷ್ಟೆಂದು ಪೇಳುವೆನು । ನಮ್ಮುಡುಪಿಯು ।
ಕೃಷ್ಣನ ಮಹಿಮೆಯನು ॥ ಪ ॥

ಅಷ್ಟೋತ್ತರ ಶತನಾರೆಂಟು ಸಾವಿರ ।
ಶ್ರೇಷ್ಠ ಮಹಿಷಿಯರ ಸೇವೆ ಕೈಕೊಂಬುವ ॥ ಅ.ಪ ॥

ದ್ವಾರಕೆಯೊಳಗೆ ನೆರೆ । ತೋರುತಲಿಪ್ಪು ।
ಸ್ವಾರಿ ಹೊರಟ ಮಾರೆ ॥
ಕಾರುಣ್ಯನಿಧಿ ಕಡಲೊಳು ಬಂದು ಕಮಲಾಸ ।
ನಾರೂಢನಾಗುವ ವರಯತಿಯನು ಕಂಡು ॥
ಘೋರತರ ಸಂಸಾರಕೂಪದಿ ।
ಸೇರಿ ಬಳಲುವ ಸಕಲ ಸುಜನರ ।
ದ್ಧಾರ ಮಾಡುವನೆಂದು ಮೂರ್ತಿಯ ।
ತೋರುತಿಲ್ಲಿಹ ತ್ರಿಭುವನೇಶನ ॥ 1 ॥

ಪಾಪಿಷ್ಠ ಕಲಿಯಾಳುತಿರುವ ಕಾಲದಲಿ ಸ್ತ್ರೀ – ।
ರೂಪದಿಂದಲಿ ಪೂಜೆಯ । ಕೊಳಲು ಸುಜ ।
ನಾಪವಾದದ ಭೀತಿಯ । ತಾನೆಣಿಸಿಮನದಲಿ ।
ತಾಪುರುಷರನು ಕಣ್ಣುಕಟ್ಟಿ ಮ ।
ಹಾವರಾಧಿಗಳೊಳಗೆ ಸೇರಿಸಿ ।
ಭೂಪತಿಗಳಲ್ಲಿರುವ ಯತಿವರ ।
ರೂಪನೊಡನಾಡುವ ಪರಾತ್ಮನ ॥ 2 ॥

ಪಾಂಡುಕುಮಾರರು ಪರ್ಯಾಯ ಕ್ರಮದಿಂದ ।
ಹೆಂಡತಿಯಾಳ್ದರೆಂದು । ದೂಷಿಸುವರ ।
ಕಂಡು ತಾ ಮನಕೆ ತಂದು । ಕಾರುಣ್ಯ ಸಿಂಧು ॥
ಕುಂಡಲೀಂದ್ರ ಗಿರೀಂದ್ರ ನಿಜಪದ ।
ಪುಂಡರೀಕ ಛಾಯಗಳ ಮತ ।
ಗೊಂಡು ಮನ್ನಿಸಿ ವತ್ಸರದ್ವಯ
॥ 3 ॥

---

**ಇದು "ತುಪಾಕಿ ವೆಂಕಟರಮಣಾಚಾರ್"ರ ಕೃತಿ ಎಂದು ಹೇಳುತ್ತಾರೆ,**
**ಆದರೆ ಈ ಕೀರ್ತನೆಯಲ್ಲಿ ಅಂಕಿತವಿಲ್ಲ !**

---

## –22–

### ರಾಗ · ತೋಡಿ – ಆದಿತಾಳ

ಏನ ಬರದೆಯೊ ಬ್ರಹ್ಮ ನೀನೆಷ್ಟು ನಿರ್ದಯನೋ || ಪ ||
ಮಾನವನು ತೊರೆದು ಪುರರನ್ನು ಬೇಡುವುದು || ಅ.ಪ ||

ಗೇಣೊಡಲು ಪೂರವುದಕೆ ಪೋಗಿ ಪರರನು ಪಂಚ ।
ಬಾಣಸುರೂಪ ನೀನೆಂದು ಪೂಗಳೆ ।।
ಅಣೆ ನಿನ್ನಾಣೆಲ್ಲ ನಾಳೆ ಬಾರಂದೆನಲು ।
ಗಾಣ ತಿರುಗುವ ಎತ್ತಿನಂತೆ ಬಳಲುವುದು ।। || 1 ||

ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು ।
ನೊಲ್ಲು ನೂಲ್ಲಿಗೆ ಅವರ ಕೂಂಡಾಡುತ ।।
ಇಲ್ಲ ಈ ವೇಳೆಯಲಿ ತಿರುಗಿಬಾರೆಂದೆನಲು ।
ಅಲ್ಲವನು ತಿಂದು ಇಲಿಯಂತೆ ಕೊರಗುವದ ।। । 2 ।।

ಹಿಂದೆ ಬರೆದ ಬರಹ ಹೇಗಾದರಾಗಲಿ ।
ಮುಂದೆನ್ನ ವಂಶದಲಿ ಜನಿಸುವರ ಕಾಯೊ ।।
ಸಂದೇಹಿಸಲು ಬೇಡ ಪುರಂದರ ವಿಠಲ ।
ಕಂದರ್ಪಜನಕ ಉಡುಪಿಯ ಕೃಷ್ಣನಾಣೆ ।।

## –23–

### ರಾಗ ಕಾಂಬೋದಿ – ಝಂಪೆತಾಳ

ಏನು ಕಾರಣ ಮೆರೆದೆ ಎಲೆ ಉಡುಪಿ ನಿಲಯ ।
ಆನೊಬ್ಬ ಜಗಕೊಡೆಯನೆಂಬಹಂಕಾರವೊ ।। || ಪ ||

ಶ್ರೀದೇವಿ ಮಡದಿ ಕಮಲೋದ್ಭವನು ಮಗನು ಉ –
ಮಾದೇವಿಧವ ಪೌತ್ರ, ನಾಸಿರ ಫಣ ।।
ಮೋದ ಹಾಸಿಗೆ ಎಂದು, ಪೊನ್ನ ಬಣ್ಣದಹಕ್ಕಿ ।
ಆದಿವಾಹನ, ದನವ ಕಾಯ್ದುದನು ಮರೆತು ।। || 1 ||

ಕ್ಷೀರಾಮೃತಾಬ್ಧಿಯಾದ ಧಾಮತ್ರಯ ಉಂಟೆಂದು ।
ಹೇಮಾಂಡ ಕೋಟಿ ಕೋಟಿಗಳು ತ್ರಸ್ನ ।।
ರೋಮ ಕೂಪಗಳಲ್ಲಿ, ವೈಮಾನಿಕ ಭಟರು ।
ಸ್ವಾಮಿ ನೀನೆಂದೆಂಬೊಹಂಕಾರದಲಿ ಮರೆತು ।। ।। 2 ।।

ದಿನಕೆ ಕೋಟ್ಯಾಭರಣವಿಟ್ಟು ಪೂಜಿಪ ಮೌನಿ ।
ಗಣವ ಸೊಬಗಿನ ಸಿರಿಯೊ ಮದನನಯ್ಯ ।।
ಇನ ಶಶಿಗಳನಂತೆ ಪ್ರಭಗೆಲುವ ಮೈಬಣ್ಣ ।
ಘನತೆಯ ಜರತಜ್ಞ ಬೇಕುಗಳ ಮರೆತು ।। । 3 ।।

ಮುದ್ದಿಗೆಣಯಿಲ್ಲನಗ ಭಾವಿ ವಿಧಿ ।
ಮಧ್ವಮುನಿ ಪೂಜಿಸುವ ಉಪ್ಪಡಿಪ ಸಿರಿಯೊ ।।
ಹೊದ್ದಿಯಿದಿರಿಲ್ಲೆಂಬ ಬುದ್ಧಿಯಲಿ ಮಾರ್ಮಲೆತು ।
ಕದ್ದು ಬೆಣ್ಣೆಯ ಮೆದ್ದ ಸುದ್ದಿಯನು ಮರೆತು ।। ।। 4 ।।

ಹೋದ ಶ್ರುತಿ ತಂದಮೃತ ಉಣಿಸಿ ಸುರರಿಗೆ ಖಳನ ।
ತಿದ್ದಿ ಶಿಶುವನು ಪೊರೆದ ಗರ್ವದಿಂದ ।।
ಭೂದೇವಿಯನ್ನಾಳಿದ ಖಳನೊದ್ದು ಅರಸಾದೆ ।
ನೀ ದೇಹ ಧರಿಸಿ ಪ್ರಸನ್ನ ವೆಂಕಟನತುತಿಕೇಳಿದ ।। ।। 5 ।।

## –24–

ರಾಗ ಶಂಕರಾಭರಣ – ಮಿಶ್ರಛಾಪುತಾಳ

ಎಂದೆಂದುಡುಪಿಲಿ ನಿಂದನಾ । ಗೋವಿಂದನ
ತಂದು ತೋರೋ ಶ್ರೀ ಮುಕುಂದನಾ ।। ।।ಪ।।

ದಂಡಪಾಶಧಾರನ ಭೂ । ಮಂಡಲದ ಮುನಿಗಳ
ತಂಡವಿತ್ತ ಭಿಕ್ಷವುಂಡನಾ, ಚೆಲ್ವ । ಕುಂಡಲ ಮಂಡಿತಗಂಡನಾ ಪ್ರ ।
ಚಂಡಮುರಾರಿ ಉದ್ದಂಡನಾ । ಗೋವಿಂದನ ।। ।। 1 ।।

ಹಾರ ಪದಕ ಕಂಕಣ । ಕೀರುಗೆಜ್ಜೆ ಉಡುದಾರ
ಮಿರ ಪೆಂಡೆಯುಗಳನ್ನಿಟ್ಟು ತನ್ನ । ನಾರಿದರಿಷ್ಟಗಳ ಕೊಟ್ಟ
ನೀರಸ ಜನರನು ಬಿಟ್ಟ ಗೋವಿಂದನಾ ।। ।। 2 ।।

ಮಂದಹಾಸವೆಂಬ ನವ । ಚಂದ್ರಿಕೆಯಿಂದೆಸೆವ ಮು
ಖೇಂದುವಿನ ನೀರಜಾಕ್ಷನ ನವ । ಚಂದನಚರ್ಚಿತವಕ್ಷನಾ, ತಾ
ನೆಂದೆಂದೂ ಭಕ್ತರ ಪಕ್ಷನ । ಗೋವಿಂದನ ॥ 3 ॥

ಮಂದಜಾಸೇಂದ್ರ, ಮುಖ್ಯ । ವೃಂದಾರಕರೊಡೆಯನ
ಇಂದಿಕಿಯೊಪ್ಪುವ ತೋಳ್ಗಳ ಶುಭ । ಕುಂದಕುಟ್ಮಲದ ಪಲ್ಗಳ ಪೊಳೆ
ವಂದುಗೆ ಒಪ್ಪುವ ಕಾಲ್ಗಳ । ಗೋವಿಂದನ ॥ 4 ॥

ವಂದ್ಯ ಹಯವದನನ । ಸಂದೇಹವಕಳೆವನ
ಚಂದದಿ ವೇದವ ತಂದನ ಆ । ನಂದದಿಂದಿಲ್ಲಿಗೆ ಬಂದನ
ನಂದನರಾಣಿಯ ಕಂದನಾ । ಗೋವಿಂದನಾ ॥ 5 ॥

## –25–

ರಾಗ · ನೀಲಾಂಬರಿ – ಮಿಶ್ರಛಾಪುತಾಳ

ಏನು ಸುಕೃತವ ಮಾಡಿದಳೊ ಯಶೋದೆ
ಶ್ರೀನಿಧಿಯಾದ ಕೃಷ್ಣನ್ನ ಕರೆದು ಮುದ್ದಿಸುವಳಂತೆ ॥ ॥ ಪ ॥

ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ ।
ಮಂಗಳಾಂಗಗೆ ಶೃಂಗರಿಸುವಳಂತೆ ॥
ತುಂಗಬೂಧರನ್ನ ತೊಟ್ಟಿಲೊಳು ತೂಗುವಳಂತೆ
ಕಂಗಳಿಗಗೋಚರನ ಕರದಪ್ಪಿಕೊಂಬಳಂತೆ ॥ ॥ 1 ॥

ನಗವನೆತ್ತಿದವನ ಮಗುವೆಂದೆತ್ತುವಳಂತೆ ।
ನಿಗಮಗೋಚರನ ತಾ ನಿಟ್ಟಿಪಳಂತೆ ॥
ಅಗಣಿತ ಸತ್ವನ್ನ ಹಗ್ಗದಿ ಕಟ್ಟುವಳಂತೆ ।
ಮಿಗೆ ನಿತ್ಯ ತೃಪ್ತಗೆ ಪಾಲನೆರವಳಂತೆ ॥ ॥ 2 ॥

ಬಹುಮುಖನಿಗೆ ಭಾಮೆ ಮುದ್ದುಕೊಡುವಳಂತೆ ।
ಅಹಿತಲ್ಪನಿಗೆ ಹಾವ ತುಳಿದೀಯೆಂಬಳಂತೆ ॥
ಮಹಾದೈತ್ಯದಲ್ಲಣನಿಗೆ ಬಹುಭಯವ ತೋರುವಳಂತೆ ॥
ಮಹಿಮ ನರಸಿಂಹಗೆ ಗುಮ್ಮನ ತೋರುವಳಂತೆ ॥ ॥ 3 ॥

ಚತುರ್ಮುಖಪಿತನ ಸುತನೆಂದೆತ್ತುವಳಂತೆ ।
ಶ್ರುತಿವಿನುತೆಗೆ ಜೋಗುಳ ಪಾಡುವಳಂತೆ ॥
ಶತರವಿತೇಜಗಾರತಿಯನೆತ್ತುವಳಂತೆ ।
ಗತಭೀತನಿಗೆ ಭಾಮೆ ರಕ್ಷೆಯಿಕ್ಕುವಳಂತೆ ॥ ॥ 4 ॥

ಕಡೆಗೋಲು ನೇಣಕೈಯಲಿ ಪಿಡಿದೊಲವಿಂದ
ಪಡುಗಡಲ ತಡಿಯ ದ್ವಾರಕೆನಿಲಯ
ಬಿಡದ ನೆಲೆಸಿಪ ಪದುಮಪದನ ಮುದ್ದು
ಉಡುಪಿಪ ಕೃಷ್ಣನ ಉಡಿಯೊಳೆತ್ತುವಳಂತೆ ॥ ॥ 5 ॥

–26–

ರಾಗ ಹಿಂದುಸ್ತಾನಿ ಕಾಪಿ – ಅಟತಾಳ

ಇಂದು ನೋಡಿದೆ ನಂದತೀರ್ಥ ಮು – ।
ನೀಂದ್ರ ವಂದಿತ ಚರಣನ ॥ ॥ ಪ ॥

ವಂದಿಸುವ ಭಕುತರಿಗೆ ನಿತ್ಯಾ – ।
ನಂದ ಫಲದ ಮುಕುಂದನ ॥ ॥ ಅ ಪ ॥

ತಮನ ವೈರಿಯ ಮಂದರಾದ್ರಿಯ ।
ಕಮಠರೂಪದಿ ಪೊತ್ತನ ॥
ಕಮಲ ಸಂಭವ ಭವಹಿರಣ್ಯಕ ।
ದಮನ ವಾಮನ ಮೂರ್ತಿಯ ॥ ॥ 1 ॥

ಭೂಮಿಪರ ಸಂಹರಿಸಿ ದಶರಥ ।
ರಾಮನಾಮದಿ ಮೆರೆದನ ॥
ಸೋಮಪಾದಿಪ ಸುತನಿಗೊಲಿದು ಸಂ - ।
ಗ್ರಾಮದಲಿ ರಕ್ಷಿಸಿದನ ॥ ॥ 2 ॥

ಬುದ್ಧರೂಪದಿ ತ್ರಿಪುರ ಸತಿಯರ ।
ಬುದ್ಧಿ ಭೇದವ ಮೊಡ್ಡನ ॥
ಯುದ್ಧದಲಿ ಕಲಿ ಮುಖ್ಯಮವನರ ।
ಗೆದ್ದ ಗಾನ ವಿಲೋಚನ ॥ ॥ 3 ॥

ದೇವಕೀ ವಸುದೇವ ತನಯನ ।
ದೇವಗಣ ಸಂಸೇವ್ಯನ ॥
ಈ ವಸುಂಧರೆಯೊಳಗೆ ಶೋಭಿಪ ।
ಮಧ್ವಸರೋವರ ನಿಕಟನ ॥ ॥ 4 ॥

ಪ್ರೇತವೇಷನ ವೀತಶೋಕನ
ಪೂತನಾದಿ ವಿಘಾತನ ॥
ಮಾತರಿಶ್ವ ಪ್ರಿಯ ಗುರು ಜಗ - ।
ನ್ನಾಥ ವಿಠಲರಾಯನ ॥ ॥ 5 ॥

## –27–

ರಾಗ ಪಾಡಿ – ಆದಿತಾಳ

ಇಂದು ಬನ್ನಿ ಇಂದಿರೇಶ ಇಂದುಪಾರದಲ್ಲಿ ಬಲು
ಅಂದದಿಂದ ಮೆರೆವ ನಾದವನ್ನೋ ನೋಡ ॥ ॥ ಪ ॥

ಮುತ್ತಿನ ಕಿರೀಟ ಮೇಲೆ ಸುತ್ತಿದ ಲತಿಕೆಗಳು
ರತ್ನೆಗಂಬಳಿ ಕಲ್ಲಿಯು ಬುತ್ತಿಪಗಲು
ತುತ್ತುತ್ತುರಿ ಎಂದು ಸ್ವರವತ್ತಿ ಊದುವ ಕೊಳಲು
ಉತ್ತಮ ಶ್ಲೋಕನು ಮರೆಯುತ್ತಲಿಪ್ಪನು ॥ ॥ 1 ॥

ಉಂಗುರಗೂದಲು ಪುಷ್ಪ ಸಿಂಗಾಡಿಯಂದದಿ ಒಪ್ಪ
ಅಂಗಾರ ಕಂಕಣ ಮಂಗಳಾಗ ನಿನ್ನಂಗ
ರಂಗತುಂಗ ಮಹಿಮ ತಾರಂಗ ಅಂಗುಲಿಲಿರತ್ನ
ದುಂಗರವ ಇಟ್ಟಿ ಸುಖಂಗಳ ನೋಡಾ ॥ ॥ 2 ॥

ಉಂಗುರವ ನಡು ಮೇಲು ಕಂಗಳ ಕುಡಿ ನೋಟ
ಗೋಪಾಂಗನೇರ ಮನಕೆ ಮೋಹಕಂಗಳ ತೋರೆ
ಅಂಗಜನೆನ್ನಿಸಿ ತಾಪಾಗಳು ವೆಗ್ಗಳದಿಂದ
ಹಂಗಿಗಾರಗೆ ನಗುವ ಗಂಗಾಜನಕ ॥ ॥ 3 ॥

ಲೋಕ ಬೆಳಗೊಂಬ ಅಲೌಕಿಕ ಮಣಿಸಾನದಲ್ಲಿ
ರಾಕಾಬ್ಜನಂದದಿ ಮೊಗನೇಕ ಲೋಕೇಶ

ನಾಕಾಜನಾದಿಗೆ ನಿತ್ಯ ಬೇಕೆಂದು ಜಪಿಸಲು ದೊ
ರಕದ ದೊಂಬಲು ಬಾ ಯಾದಾಕುಲಾಂಬರಾ ॥ ॥ 4 ॥

ತೂಗುವ ಕುಂಡಲ ಕರ್ಣ ಶ್ರೀಗಂಧ ಪೂಸಿದ ವಕ್ಷ
ಪೂಗೊಂಚಲ ಸಣ್ಣನಾಮ ಆ ಗೆಜ್ಜೆ ಧ್ವನಿ
ಆಗಮನ ನೋಲಿಸೆ ನಾಮ ಬೋಗದಲ್ಲಿಪ್ಪ ಮಧ್ವ
ಯೋಗಿ ಪ್ರಿಯ ವಿಜಯವಿಠ್ಠಲ ಗುಣನಿಧಿ ॥ ॥ 5 ॥

–28–

ರಾಗ ಶ್ರೀ – ತ್ರಿಪುಟತಾಳ

ಇಂದ್ರಲೋಕದ ಪೋಲ್ವದ್ವಾರಕಿ ।
ಯಿಂದ ಸಮುದ್ರನು ಸಲಹಲೋಸುಗ ।
ಸಿಂಧುವಿನ ಮಾರ್ಗದಲಿ ತೌಳವ ಜನರ ದೇಶಕ್ಕೆ ।
ಬಂದು ಮಧ್ವಾಚಾರ್ಯರಾ ಕೈ – ।
ಯಿಂದ ಪೂಜೆಯಗೊಂಡ ಕೃಷ್ಣನ ।
ಮಂದಹಾಸದ ಮುದ್ದು ಮೊಗ ನೋಡುವಗೆ ಸಂಪದವು ॥ ॥ 1 ॥

ಒಂದು ಕರದಲಿ ನೇಣು ಸಿರಿ ಮ –
ತ್ತೊಂದರಲಿ ಕಡಗೋಲು ವರಮಣಿ
ಯಿಂದ ಶೋಭಿಪ ವಕ್ಷನಾಭಿಯು ತಾವರೆಯು ಅರಳು ॥
ಚಂದ್ರನಂದದ ವದನ ಸಮುದದಿ
ನಿಂದ ಪಾದ ಮನೋಹರೋರು –
ದ್ವಂದ್ವ ಕೃಷ್ಣನಮೂರ್ತಿನೋಳ್ಪರ ನಯನಸುಕೃತಫಲ ॥ ॥ 2 ॥

ನಿತ್ಯದಲಿ ಗೋಘೃತದ ಮಜ್ಜನ
ಮತ್ತೆ ಸೂಕ್ತ ಸ್ನಾನ ತದನು ಪ –
ವಿತ್ರತಮ ವಿಚಿತ್ರತರವಾ ಕಲಶದಭಿಷೇಕ ॥
ವಸ್ತ್ರ ಗಂಧ ವಿಭೂಷಣಂಗಳು
ವಿಸ್ತರಿಪ ಶ್ರೀ ತುಳಸಿ ಪುಷ್ಪದಿ
ಭಕ್ತಿಭರಿತರು ಮಾಡುವಾರಾಧನೆಯ ನೋಡೆಂಬೆ ॥ ॥ 3 ॥

ಸುತ್ತ ಸಪ್ತಾವರಣದರ್ಶನ
ವಿಸ್ತರಿಪ ಸ್ತೋತ್ರಗಳ ಗಾನ ವಿ –
ಚಿತ್ರತರ ನೈವೇದ್ಯ ಬೆಳಗುವ ಧೂಪ ದೀಪಗಳು ॥
ರತ್ನದಾರತಿಗಳು ಸುಸಂಭ್ರಮು
ಛತ್ರ ಚಾಮರ ನೃತ್ಯ ಗೀತಾ
ದ್ಯುತ್ಸವಗಳೊಪ್ಪಿಹವು ದೇವನ ಮುಂದೆ ದಿನದಿನದಿ ॥ ॥ 4 ॥

ಅಪ್ಪಮೊದಲಾದಮಲ ಭಕ್ಷ್ಯವ
ತುಪ್ಪ ಬೆರೆಸಿದ ಪಾಯಸದ ಸವಿ
ಯಿಪ್ಪ ಶಾಖವ ಗುಡಗಳನು ಕಂದರ್ಪನಪ್ಪನಿಗೆ ॥
ಅರ್ಪಿಸುವರನುದಿನದಿ ರಸ ಕೊ –
ಡಿಪ್ಪ ಪಕ್ವಫಲಾದಿಗಳ ರಮೆ –
ಯಪ್ಪಿಕೊಂಡಿಪ್ಪಚ್ಯುತಗೆ ಪೂಜಿಪರು ಯೋಗಿಗಳು ॥ ॥ 5 ॥

ಮೆರೆವ ದೀಪ ಸಹಸ್ರವಚ್ಯುತ
ನೆರಡು ಭಾಗಗಳಿಂದ ನೀಲ
ಸ್ಫುರದಮಲ ಮಣಿಮಯದ ಹಾರಾವಳಿಗಳೊಪ್ಪಿಹವು ।
ದುರಿತರಾಶಿಗಳವನ ಸೇವಾ –
ನಿರತ ಸುಜನರ ತನುಮಂಗಳ
ತೊರೆದಿಹುದು ಸಿರಿನೆಲೆಸಿಹುದು ಶ್ರೀಕೃಷ್ಣಶೃಂಗಾರ ॥ ॥ 6 ॥

ತೊಟ್ಟ ಭೂಷಣವಿಟ್ಟ ಮಕುಟವ –
ನುಟ್ಟ ಪಟ್ಟೆಯ ಮುಟ್ಟ ತ್ರಿಗುಣವ
ಬಿಟ್ಟ ದುರಿತವ ಕೊಟ್ಟ ನೀ ಶುಭ ವಾಕ್ಯಗಳ ನಮಗೆ ॥
ನಿಷ್ಠ ಸುಜನರು ತೆಟ್ಟಸ ಮನ
ಮುಟ್ಟಿ ನೆನೆವರಿಗಿಷ್ಟ ಅಖಿಳವ
ಕೊಟ್ಟು ಸಲಹದೆ ಸೃಷ್ಟಿಯೊಳು ನೀಗಿಪ್ಪ ಗುಣಪುಷ್ಟ ॥ ॥ 7 ॥

ಏನಸಂಬನು ಕೃಷ್ಣದೀನರ
ದೊರೆಯು ನೀನೆಂದಾದ ಕಾರಣ
ಮಾನವರ ಸುರಧೇನುತನ ನಿನಗಿಂದು ಸೇರಿತಲ ॥
ಹೀನತೆಯು ಪರಿಹರಿಸಿ ಭಾಗ್ಯಾಂ –
ಭೋನಿಧಿಯೆ ನಿಜಗಿರೀವ ನಿನ್ನ ಮ –
ಹಾನುಭಾವದ ಒಲುಮೆಗೆಣೆಗಾಣೆನು ಮಹಾಪ್ರಭುವೆ ॥ ॥ 8 ॥

ಬಾಪ್ಪು ದಿವಿಜರ ದೇವರಾಯನೆ
ಬಾಪು ಭಕುತರಭೀಷ್ಟ ಈವನ
ಬಾಪು ಹರಿನೀಲೋತ್ಪಲನೆ ಶ್ಯಾಮಲನೆ ಕೋಮಲನೆ ॥
ಬಾಪು ಹಯವದನಾಖಿಲೇಶನೆ
ಬಾಪು ಸುಜನರಪಾಪನಾಶನ
ಬಾಪು ಕೃಷ್ಣಾಲಸತ್ಸ್ಯೆಪಾಲಕನ ಬಾಲಕನ ॥ ॥ 9 ॥

-29-

ರಾಗ : ಆರಾಣ – ಆದಿತಾಳ

ಎಂಥಪಾವನ ಪಾದವೊ । ಕೃಷ್ಣಯ್ಯ ಇ– ।
ನ್ನೆಂದ ಚೆಲುವ ಪಾದವೊ ॥
ಎಂಥಪಾವನಪಾದ ಇಂತು ಜಗದಿ ಕೇಳು
ಪಂಥದೊಳಿಹ ಕುರುಪತಿಯನುರುಳಿಸಿದ ಪಾದ ॥ ॥ ಅ.ಪ ॥

ಹಲವು ಕಾಲಗಳಿಂದಲೀ । ಮಾರ್ಗದಿ ।
ಶಿಲೆ ಶಾಪ ಪಡೆದಿರಲು ॥
ಒಲಿದು ರಜದಿ ಪಾವನಗೈದು ಕರುಣದಿ ।
ಶಿಲೆಯ ಬಾಲೆಯ ಮಾಡಿ ಸಲಹಿದ ಹರಿಯ ॥ ॥ 1 ॥

ಬಲಿಯ ದಾನವನೆ ಬೇಡಿ । ತ್ರೈಲೋಕ್ಯವ ।
ನಳೆದು ಏಕಾಂಘ್ರಿಯಲಿ ॥
ಬೆಳೆದು ಬೇಧಿಸಲಾಗ ನಳಿನಜಾಂಡವ ಸೋಕೆ ।
ಚೆಲುವ ಗಂಗೆಯ ಪೆತ್ತ ಜಲಜಾಸನಾರ್ಚಿತ ॥ ॥ 2 ॥

ಚೆಂಡು ತರುವ ನೆಪದಿ । ಕಾಳಿಂಗನ । ಉ
ದ್ದಂಡ ಮಡುವ ಧುಮುಕಿ ॥
ಚಂಡ ಕಾಳಿಂಗನ ಮಂಡೆಯೊಳು ಪಾದ ।
ಪುಂಡರೀಕವನಿಟ್ಟು ತಾಂಡವ ಮಾಡಿದ ॥ ॥ 3 ॥

ಸಂತತ ಸೌಖ್ಯವೀವ । ಕಾವೇರಿಯ ।
ಅಂತರಂಗದಿ ನೆಲೆಸಿ ॥

ಸಂತೋಷದಿಂದ ಅನಂತನ ಮೇಲ । ನಿ–
ಶ್ಚಿಂತೆಯೊಳ್ ಲಕುಮಿ ಭೂಕಾಂತೇರು ನೇವಿಷ ॥ ॥ 4 ॥

ಒಲಿದು ಗಯಾಸುರನ । ಶಿರದೊಳಿಟ್ಟು ।
ಹಲವು ಭಕ್ತರ ಪೊರೆದು ॥
ನೆಲೆಸಿ ಉಡುಪಿಲಿ ಎನ್ನ ಹೃದಯ ಕಮಲದಲ್ಲಿ
ತೊಲಗದೆ ಇರುತಿಪ್ಪ ಸುಲಭ ಹಯವದನನ ॥ ॥ 5 ॥

## –30–

### ರಾಗ , ಶ್ರೀರಾಗ – ತ್ರಿಪುಟತಾಳ

ಎಂದು ಕಾಂಬೆನೊ ಎನ್ನ ನಲಹುವ ।
ತಂದೆ ಉಡುಪಿಯ ಜಾಣನ ।
ಮಂದಹಾಸ ಪ್ರವೀಣನ
ಇಂದಿರಾ ಭೂ ರಮಣನ ॥ ॥ ಪ ॥

ಕಡಲ ದಡದೊಳು ಎಸೆವರಂಗನ
ಕಡೆಗೋಲು ನೇಣು ಪಿಡಿದನ ॥
ಮೃಡ ಪುರಂದರರೊಡೆಯನ ಈ ।
ರಡಿಗಳಲಿ ಶಿರವಿಡುವ ನಾ ॥ ॥ 1 ॥

ದೇವಕಿಯ ಜಠರದಲಿ ಬಂದನ ।
ಆವ ಪಳ್ಳಿಲಿ ನಿಂದನ ॥
ಮಾವ ಕಂಸನ ಕೊಂದನ ।
ಕಾಮನಯ್ಯ ಮುಕುಂದನ ॥ ॥ 2 ॥

ಪೂರ್ಣ ಪ್ರಜ್ಞರಿಗೊಲಿದು ದ್ವಾರಕೆ ।
ಮಣ್ಣಿನೊಳು ಪ್ರಕಟಿಸಿದನ ಭ– ।
ವಾರ್ಣವಕೆ ಪ್ಲವನಾದವನ ಪ್ರ – ।
ಸನ್ನ ವೆಂಕಟವಿಠಲನ ॥ ॥ 3 ॥

## –31–

### ರಾಗ · ಶಂಕರಾಭರಣ – ಮಿಶ್ರಛಾಪುತಾಳ

ಎಂದೆಂದುಡುಪಿಲಿ ನಿಂದನಾ । ಗೋವಿಂದನ
ತೆಂದು ತೋರೋ ಶ್ರೀ ಮುಕುಂದನಾ ॥ ॥ ಪ ॥

ದಂಡ ಪಾಶಧಾರನಾ ಬೊ । ಮಂಡಲದ ಮುನಿಗಳ ।
ತಂಡವಿತ್ತ ಭಿಕ್ಷವುಂಡನಾ । ಚೆಲ್ವ । ಕುಂಡಲಮಂಡಿತ ಗಂಡನಾ
ಪ್ರಚಂಡ ಮುರಾರಿ ಉದ್ದಂಡನಾ ಗೋವಿಂದನಾ ॥ 1 ॥

ಹಾರಪದಕಾ ಕಂಕಣ । ಕೀರುಗೆಜ್ಜ ಉಡುದಾರ ।
ನೀರ ಪೆಂಡೆಗಳನ್ನಿಟ್ಟ ತನ್ನ । ಸಾರಿದರಿಷ್ಟಗಳ ಕೊಟ್ಟ ॥
ನೀರಸ ಜನರನು ಬಿಟ್ಟ । ಗೋವಿಂದನ ॥ 2 ॥

ಮಂದಹಾಸವೆಂಬ ನವ । ಚಂದ್ರಿಕೆಯಿಂದೆಸೆವ
ಮುಖೇಂದುವಿನ ನೀರಜಾಕ್ಷನ ನವ । ಚಂದನಚರ್ಚಿತ ವಕ್ಷನ ।
ತಾನೆಂದೆಂದೂ ಭಕ್ತರ ಪಕ್ಷನ । ಗೋವಿಂದನ ॥ 3 ॥

ಮಂದಜಾನನೇಂದ್ರ ಮುಖ್ಯ । ವೃಂದಾರಕರೊಡೆಯನ
ಇಂದಿರೆಯೊಪ್ಪುವ ತೋಳ್ಗಳ ಶುಭ । ಕುಂದಕುಡ್ಮಲದ ಪಲ್ಗಳವೊಳೆ
ನಂದಾಗೆ ಒಪ್ಪು ಕಾಲ್ಗಳ ಗೋವಿಂದನಾ ॥ ॥ 4 ॥

ವಂದ್ಯ ಹಯವದನ ಸಂದೇಹವ ಕಳೆವನ
ಚೆಂದದಿವೇದವ ತಂದನ ಆ । ನಂದದಿಲ್ಲಿಗೆ ಬಂದನ
ನಂದನ ರಾಣಿಯ ಕಂದನಾ । ಗೋವಿಂದನಾ ॥ ॥ 5 ॥

–32–

ರಾಗ : ಕಲ್ಯಾಣಿ – ಆದಿತಾಳ

ಕಡುಮುದ್ದು ಮೋಹನನಾದ ಈ ಸೊಬಗ ನ–
ಮ್ಮುಡುಪಿನ ಕೃಷ್ಣರಾಯನ ನೋಡು ನೋಡು ॥ ॥ ಪ ॥

ಬೊಮ್ಮರುದ್ರಾದಿಗಳ ಕಣ್ಣಿಗೋಚರಿಸದ
ನಿರ್ಮಲ ಚಿನ್ಮಯ ಬೊಮ್ಮವೆ
ನಮ್ಮ ಚರ್ಮದೃಷ್ಟಿಗಳಿಗೆ ಗಮ್ಯವಾಯಿತ–
ಮ್ಮಮ್ಮ ಇನ್ನಾರ ಪುಣ್ಯವೊ ನೋಡು ನೋಡು ॥ ॥ 1 ॥

ಶುದ್ಧ ಸಿದ್ಧಾಂತವ ಜಗಕೆ ತೋರಿಸಿದ
ಮಧ್ವಮುನಿಗೊಲಿದು ಬಂದ

ಅಬ್ಧಿ ಜೆಯುರನನೀತನು ತನ್ನ
ಹೊದ್ದಿದವರಿಗರ್ಧ ಶರೀರವನೀವನ ನೋಡು ನೋಡು ॥ ॥ 2 ॥

ಚೆಲುವ ಪಾದ ಜಾನೂರು ಕಟಿ ನಾಭಿ ಕರಿ
ಡೊಳ್ಳು ವಕ್ಷ ಕಂಬು ಕಂಧರ
ಬಳ್ಳಿಗೋಲು ಗಲ್ಲ ವಕ್ತ್ರನೇತ್ರ ಮೌಳಿಯು ನಲ್ಲ
ಗೊಲ್ಲಪಳ್ಳಿಯ ನೊಲ್ಲದೆ ಬಂದನೆ ॥ ॥ 3 ॥

ಶ್ರುತಿಗೆಗೋಚರ ನೆನಿವ ಯತಿ ತತಿ
ಮತಿಗೆ ಮೈಗೊಡದ ಬೊಮ್ಮ
ಪತಿತ ಪಾತಕಿಗಳಿಗೆ ಕ್ಷಿತಿಯೊಳ
ಗತಿ ಸುಲಭವಾಯಿತಿನ್ನು ನೋಡು ನೋಡು ॥ ॥ 4 ॥

ಬಲ್ಲವರೆ ಒಲ್ಲರಿವನ ಈ ಮಹಿಮೆಯು
ದುರ್ಲಭಭಕ್ತ ದುರ್ಲಭನಿವ
ಚೆಲ್ವಹಯುವದನನಾದ ಭಕುತಿ ಯುತಿ
ವಲ್ಲಭನಿಂದಿಲ್ಲಿ ಸುಲಭ ನೋಡು ನೋಡು ॥ । 5 ।

## –33–

ರಾಗ · ಬಿಲಹರಿ – ಛಾಪ್ರತಾಳ

ಕಡೆಗೋಲು ತಾರನ್ನ ಚಿನ್ನವೇ । ಪೂಸ
ರೊಡೆದರೆ ಬೆಣ್ಣೆಯು ಬಾರದು । ರನ್ನವೇ ॥ ಪ ॥
ಅಣ್ಣನ ಒಡಗೊಂಡು ಬಾರಯ್ಯ । ನವಿ ।
ಬೆಣ್ಣೆಯ ಮುದ್ದೆಯ ಮೆಲುವಿರಂತೆ ॥
ಬಣ್ಣದ ಸರವನ್ನು ಕೊರಳಲ್ಲಿ ಹಾಕುವೆ ।
ಚಿಣ್ಣರೊಡನೆ ಕಳುಹುವೆ ರಂಗ ।1।

ಪುಟ್ಟಬೂಚಿಯು ತಂದು ನಿನ್ನಯ । ಚಿನ್ನದ ।
ತೊಟ್ಟಿಲ ಕಾಲಿಗೆ ಕಟ್ಟಿಸುವೆ ।।
ಬಟ್ಟಲು ತುಂಬಿದ ಸಕ್ಕರೆ ನಿನಗೀವೆ ।
ಕಟ್ಟಾಣಿ ಮುತ್ತಿನ ಸರವನೀವೆ ।। ।2।

ಬಡವರ ಭಾಗ್ಯದ ನಿಧಿಯೇ । ಗೋಕುಲ ।

ಸೊಡಯುನೆ ಮಾಣಿಕ್ಯದ ಹರಳೇ ||
ಕಡುಮುದ್ದು ಉಡುಪಿನ ಬಾಲ | ಕೃಷ್ಣಯ್ಯ |
ಮಡುಕು ಮಾಡುವರೇನೊ ಹೆಂಗಳೂಳು ರಂಗಯ್ಯ || | 3 |

## –33–

ರಾಗ ರಾಗಮಾಲಿಕ – ಆದಿತಾಳ

ಕಾಮನ ಪಿತಾ ಕೃಷ್ಣ ಕಾಮಿನಿಯಾದನು | ಕಾಮನಪಿತಾ ಕೃಷ್ಣಕಾಮಿ
ನಿಯಾಗುವ್ರು | ಕಾರಣ ಕೇಳಿರಿ | ಕಾಮಿನೀ ಶ್ರೀಹರೀ || ಆ ಮಹಾ
ಸುರರಿಗೆ | ಸುದೆಯಾನಹಂಚೋಣ ನಾಲು ಶ್ರೀ ಪಾದಾ ಪತಿ
ಯಾತಾ ಸ್ತ್ರೀಯಾದ ಚಲುವಿ || ಕಾಮನಪಿ || || ಪ ||

ರುಳಿಲುಲ್ಲು ಗೆಜ್ಜ | ಪ್ರೆಜಣ ಪಗಡಪನಿಟ್ಟು ಚರಣಾದ ಕಾಲು
ಗಂರ ಪಿಲ್ಯಾ | ಮಿಂಯೀರ | ರ್ಘುಣ ರುಣನಾವ ಕಾಳಿಯ
ಮಣ ತುಳಿವಂಪ | ಖಳರ ಮರ್ಧನ ದಿವ್ಯ | ತರು ತಾನಾದನು | |1|

ಶರಗು ನಿರಿಯುಚರತಾರಿ | ಪೀತಾಂಬರ | ಬಿಡಿ ಮುತ್ತಿನುಡಿಗಂ
ಟೆ | ನಡುವೀ ನೊಡ್ಯಾಣ | ನತಗರರಿಂದೊಪ್ಪು | ತಾಳಿ ಪದಕವಿ–
ಟ್ಟು | ಮ್ರುತನ ಪ್ರಿಯಾನ ಮುದ್ದು ಮಾಡದಿ ತಾನಾದನು || | 2 |

ಕಂಚುಕ ತೋಳಿನಲೂಪಂಕಿ | ಬಾಬು ಬಂದು | ಬಿಂಚಿನಂದದೀ | ನಲಿ
ದಾಡುವ ಗೊಂಡ್ಯವ್ರು | ಕಂಕಣ ತೋಡ್ಯ | ಪಜ್ರದ ದ್ವಾರ್ಯ | ಹರ
ಡೀಯು | ಪಂಚ ಬೆರಳಿನಲ್ಲುಂಗುರನಿಟ್ಟು ಸೂಬಗಲಿ || | 3 |

ಚಿಂತಾಕು ನರಗಿ ಚಿನ್ನದಗುಂಡು ಹವಳಾವ್ರ ಕಂಪು ಏಕಾವಳಿ | ಮಲ
ಕು ತಾಯಿತ ಮುತ್ತು | ಮಿಂಚುವ ಪದಕ | ಮುತ್ತಿನ ಕರಾಣಿಯು
ಪಂಚರತ್ನದ ಹಾರ | ಪರಮಾತ್ಮಗಲವ್ರೂತ || 4 || ಉಂಗುರ ಕೂದಲು |
ಶೃಂಗಾರ ಕ್ಯಾದಿಗಿ | ಚಂದ್ರಾ ಚೌಪುರೀಜಾಡೆ | ಭಂಗಾರರಾಗುಟು
ಮುಂದೆ ಮುತ್ತಿನದಂಡೀ | ಮುಡಿಯಲ್ಲೀ ಒಪ್ಪಿದ್ದ | ದುಂಡುಮಲ್ಲಿಗೆ
ದೋಷಧೂರಸೀಗಲವ್ರೂತಾ || 5 || ಮಜಿನವಾಲೆ ಬುಗುಡಿ ಬಾಳ್ಯ | ಚಳ
ತುಂಬು | ಚಂದ್ರಮುರವು | ಚಿನ್ನದಖಿಡ್ಡಿ | ಕಿವಿಯಲ್ಲೇ | ಕುಂದಾಣ
ಕುಸುರು | ಪಜ್ರಗಳು ಕೆಂಪ್ಪಾಳೆವಂತೇ | ದುಂಡುಮುತ್ತಿನಾ ಮುಖುರವು

ಪೂಗಿನಲ್ಲಿಟ್ಟು 1 6 1 ಅಚ್ಚು ಮುತ್ತಿನ ವಂಡಿ 1 ಕುಚ್ಚು ತೊಂಡಿಲುಗಳೂ 1 ಹಚ್ಚಿಯು ಬೊಟ್ಟೂ 1 ಕಸ್ತೂರಿ ಕುಂಕುಮನಿಟ್ಟು 1 ವಜ್ರ ಮಾಣಿಕ್ಯದಾರಾ ಳಿಲಿ 1 ಚಂದ್ರ ಸೂರ್ಯರಂ 1 ನಿತ್ಯತೃಪ್ತನು 1 ನೀಲವರ್ಣದಿಂಧೊಳೆ ವುತ 1 7 1 ಆ ಮಹಾ ವೈಕುಂಠ 1 ಪುರದಾರನಾದ 1 ಈ ಮಹಾರಜತಪೀ– ರ ಪುರವಲಿ ಬಂದು 1 ಪ್ರೇಮದಿ ನಿಂತು 1 ನೋಡುತ ಬಂದಾ ಜನರೀಗೆ 1 ಕಾಮಿತ ಫಲ ಮುಕ್ತಿ ಕೊಡುವೊ ಕಮಲ ಪತಿ 11 8 11 ಅಷ್ಟ ಮಯತಿ ಗಳಿಂದಲ್ಲೀ 1 ಪೂಜಯುಗೊಂಬೊ 1 ಲಕ್ಷ್ಮೀಯುಪತಿಯು ಸ್ತ್ರೀರೂಪವ ಧರಿಸೀರೆ 1 ದೃಷ್ಟಿಂದೆ 1 ನೋಡಾದಿಸ್ನುವ್ರೋಕಿ 1 ಭೀಮೇವ 1 ಕೃಷ್ಣ 1 ನಿನ್ನ ಮನದಲ್ಲಿಟ್ಟು ಸ್ತುತಿಸುವೇನು 11 ಕಾಮಾನಪಿತ ಕಾಮಿನಿಯಾದನು 191

## –35–

ರಾಗ ಮಂತುವರಾಳಿ – ಏಕತಾಳ

ಕುಣಿದಾಡೊ ಕೃಷ್ಣ ಕುಣಿದಾಡೊ 11 ಪ 11 ಮಣಿಯು ಮೆಟ್ಟಿ ಬಾಲವ ಪಿಡಿದು 1 ಕುಣಿಕುಣಿದಾಡುವ ಪಾದದೊಳೊಮ್ಮೆ i 1ಅ. ಪ.1

ಮುಂಗುರುಳುಂಗುರ ಜಡೆಗಳರಳೆಲಿ 1 ಪೊಂಗೊಳಲಲಿ ರಾ
ಗಂಗಳನುಡಿಸುತ್ತ 1 ತ್ರಿಭಂಗಿಯುಲಿನಿಂದು ಧಿಗಿಧಿಗಿತಾಂಗಣ 1
ತಾಂಗಿಣಾ ಧಕ್ಕ ಧಕ್ಕ ದಿಮಿಯೆಂದು 1 1 1 ಮುಖಜಾರಿದು ಪುಲ್ಲಂಗ
ವಾಜಿಯೆ 1 ಝುಂ ಝುಂ ಚುಂಬನಕಾಗಿ 1 ಝುಣಾಂ
ಝುಣಾಂ ಝುಂ ಕಿಟತಾಕಿಟಕಿಟ ತೋಂಗಿಣ ತೇ 1 ಧಿಮಿತೇಂ
ಗಿಣಿ ಪಾದದೊಳೊಮ್ಮೆ 1 2 1 ಪ್ರಕಟದಿ ದಿನಗಳು ಪರಿಚಾರಂಗಳು 1
ವಿಕಲಿತ ನಾಟಕ ಭೇರಿಗಳು 1 ತೊಂಕಿಣ ತೊಂಡಿರಿ ತೊಂತರಿ
ತರಗಿಟ 1 ತಕ್ಕಿಟ ತರಿಗಿಟ ತಕ್ಕಿಟ ಶಬ್ದದಿ 1 3 1 ಪೆರಗಣಾಂ
ಚಿತ್ತಲಿಪಂವೆಗಂ 1 ನರಹರ ಪ್ರತಿಜವಾಗರಶೆಂದ 1 ಪ್ರುಣಾಂಉರಾಂ
ಎಂದು ಧಿಮಿಕಿಟ ಧಿಮಿಕಿಟ 1 ತಧಿಕುತ ಧಿಕುತಂ ತದ್ಧಾಧ್ಯ ಎಂದು 1 4 1
ಪಂಚಸ್ಥಳದಲಿ ಲಘುವಿಡಿದೊಮ್ಮೆ 1 ಗಣಪತಿ ನರಸಿಂಹ
ಕೋನೇರಿ ತಿಮ್ಮ 1 ಪಂಚನಾಟಕ ಭೇಧವ ಪಾಜಿಸುತ್ತ ಉಡುಪಿ
ಲಿ ನಿಂದನು ಪುರಂದರ ವಿಠಲ 1 5 1

## –35–

ರಾಗ ಪಂತುರಾವಳಿ – ಏಕತಾಳ

ಕೂಸಿನ ಕಂಡೆವಮ್ಮ ।
ಅಮ್ಮ ನಿಮ್ಮ ಕೂಸು ಕಂಡೆವಮ್ಮ ॥ ॥ ಪ ॥

ಕಾಸಿಗೆ ವೀಸವ ಬಡ್ಡಿಗಳಿಸಿ ಕೊಂಡು ।
ಶೇಷಗಿರಿಯ ಮೇಲೆ ವಾಸವಾಗಿದ್ದನೆ ॥ ॥ 1 ॥

ವಂಚಿಸಿ ಬಲಿಯೊಳ್ ಪ್ರಪಂಚವೆಲ್ಲ ಸೆಳೆದು ।
ಕಂಚಿಪಟ್ಟಣದಿ ಬಲು ಮಿಂಚಾಗಿದ್ದನೆ ॥ ॥ 2 ॥

ಗುಡ್ಡ ಬೆರಳೊಳೆತ್ತಿ ದೊಡ್ಡ ಗೋವ್ಗಳ ಕಾಯ್ದು ।
ಬಡ್ಡಿ ಜಗನ್ನಾಥ ಗಿಡ್ಡಾಗಿದ್ದನ ॥ ॥ 3 ॥

ದುಡುಕು ಮಾಡಿ ಹಾಲು ಮಡಕೆಗಳ ಒಡೆದು ।
ಹಡಗನೇರಿ ಬಂದು ಉಡುಪಿಲಿ ಇದ್ದನೆ ॥ ॥ 4 ॥

ಮಂಗಳ ರೇಖೆ ಪಾದಂಗಳುಳ್ಳ ನಿಮ್ಮ ।
ರಂಗ ಪುರಂದರ ಶ್ರೀಕೃಷ್ಣನೆ ॥ ॥ 5 ॥

## –36–

ರಾಗ ಕಲ್ಯಾಣಿ – ಆದಿತಾಳ

ಕೃಷ್ಣ ಎನಗೆ ಬಂದರಿಷ್ಟವ ಕಳೆದು ನಿನ್ನ
ನಿಷ್ಠೆಯಲಿ ಇರುವಂತೆ ಇಷ್ಟೆ ಮಾತುರವೀಯೊ ॥ ॥ ಪ ॥

ನಿರ್ದೋಷ ಗುಣಪಾರುಧಿ ನಿರ್ಧಾರವಾಗಿ ನುಡಿವೆ
ಸಿದ್ಧಾಂತೆ ಮತದ ಪೊದ್ದಿಪದೆ ನಾಕು ॥ ॥ 1 ॥

ಅಜ ಭವಾದ್ಯರು ನಿನ್ನ ಭಜಿಪರಾರು ದೋಷ
ವ್ರಜದ ಮಾನವ ತಿಳಿದು ಭಜಿಸಬಲ್ಲನೆ ದೇವಾ ॥ ॥ 2 ॥

ಮಧ್ವ ಸರೋವರದಲ್ಲಿ ಇದ್ದು ಪೂಜೆಯಗೊಂಬ
ಮುದ್ದು ವಿಜಯವಿಠ್ಠಲ ಬಿದ್ದೆ ನಿನ್ನಯ ಪದಕೆ ॥ ॥ 3 ॥

## –37–

ರಾಗ ಪೂರ್ವಿ – ಆಟತಾಳ

ಕೃಷ್ಣ ಭವರೋಗವ ಮದ್ದು
ಕೃಷ್ಣ ಅಭಿಮಾನವಕಾಯ್ವಾತ ನಿಂದಲ್ಲಿದ್ದು ll ॥ ಪ ॥

ದುಷ್ಟದನುಜರ ಹುಡಿಗಟ್ಟಿ ನಂಬಿದ ಸುರರ
ದಿಟ್ಟರಮಾಡಿದ ಜಗಜೆಟ್ಟಿ ರಂಗಧೀರ ll ॥ 1 ॥

ಮತ್ತೆ ಕೌರವರ ಗೆದ್ದು ಚಿತ್ತದಿ ತನ್ನ ನಂಬಿದ
ಪಾರ್ಥರ ಪಾಲಿಸಿದ ಸಮರ್ಥ ಪಾಲಿಸಿದ ಪಾದ ll ॥ 2 ॥

ಮಧ್ವರ ಪೂಜಿತ ಪಯೋಬ್ಧಿತನುಜೆಯರಸ
ಹೃದ್ಯ ಹಯವದನ ಸಮೃದ್ಧ ವೈಕುಂಠಾಧೀಶ ll ॥ 3 ॥

## –38–

ರಾಗ ಅಹರಿ – ಅಟ್ಟತಾಳ

ಕೃಷ್ಣನ್ನ ಬಲೂತ್ಕೃಷ್ಟನ್ನ ವಿಶಿಷ್ಟನ್ನ ಸ್ತುತಿಸಿ ತುಷ್ಟನ್ನ ॥ ಪ ॥
ಗೋಪಳ್ಳಿಯೊಳಗಂದು ನಿಂದನ್ನ ಬಲು
ಗೋಪಿಯು ಕೂಡ ನಂದನಾ 1 ಗೋಪಿಚಂದನದಿಂದ ಬಂದನ್ನಾನಮ್ಮ
ಗೋಪಾಲವಿಷ್ಣು ಗೋವಿಂದನ್ನ ॥ ॥ 1 ॥

ಅಪಾರಮಹಿಮ ನೆನೆಸುವನ್ನಾ ಭಕುತಗಾಪತ್ತು ಬರಲು ಮಾಣಿಸುವನ್ನ
ತಾಪಸಿಗಳಿಗೆ ಕಾಣಿಸುವನ್ನಾ ದಿತ
ರೂಪವ ಧರಿಸಿ ಜನಿಸುವನಾ ॥ ॥ 2 ॥

ರಜತಪೀಠಪುರವಾಸನ್ನ ಮಹ
ರಜನೀಚರರ ವಿನಾಶನ್ನ
ತ್ರಿಜಗದೊಳಗೆ ಪ್ರಕಾಶನ್ನ ನಮ್ಮ ವಿಜಯವಿಠ್ಠಲ ವಾಸಿಸನ್ನ ॥ 3 ॥

## –38–

ರಾಗ : ಶಂಕರಾಭರಣ – ಅಟ್ಟತಾಳ

ಕೃಷ್ಣಾ ನಿನ್ನ ಕನಿಷ್ಠ ಪೊಳೆವ ಉಂಗುಷ್ಠ ಭಜಿಸುವ
ನಿಷ್ಟ ಜನರ ಉಚ್ಚಿಷ್ಟ ಎನಗದು ಮೃಷ್ಟಾನ್ನವಾಗಲಿಷ್ಟೆ ಬೇಡಿದೆನೊ ॥ ಪ॥

ಪರಲೋಕದ ಸುಖ ಪರಿಪರಿಯಲ್ಲಿ ಅರಿಪಸಪದೊಳು
ಪರಮಸೌಖ್ಯ ಎಳ್ಳನಿತಿಲ್ಲ ಬರಿದ ಜನನ ಮರಣ
ಪರಿಯಂತ ಅರಿಸಿನೋಡಲು ದುರಿತವಾರುಧಿ
ತೆರೆಯೊಳಗೆ ನಿಂದಿರಲಾರೆ ಸಾಕು ಶರಣು ಹೊಕ್ಕೆನು
ಕರುಣವಾಂಗನೆ ಕರವಿಡಿದು ಸಲಹೋ ॥ ॥ 1 ॥

ಆವದುಂಟದು ದೇವ ಮಾಡಿನು ಈ ವರವ ಕೊಡು
ನಾ ಬಾವನು ಒಲ್ಲೆ ಭಾವಶುದ್ಧ ವಾಕ್ಯವೆ ನಿಶ್ಚಯವು
ಜೀವ ಜನ್ಮದ ನೋವು ಬಯಿವ ಮಾ
ನವ ದಶಕ್ತಿ ನೀ ಕಾಮನಯ್ಯನ ಕಾವ ಜಗತ್ರಯವ
ಜೀವ ನಿನ್ನಂಘ್ರಿ ಸೇವ ಸಂಪದವು ॥ ॥ 2 ॥

ಹಡಗದೊಳಗಿಂದ ತೆಡಿಯದೆ ಬಂದು ಕಡಗೋಲು ನೇಣ
ಪಿಡಿದು ಪಡುವಲಗಡಲತೀರದ ಉಡುಪಿಯಲಿ ನಿಂದ
ಅಡಿಗಡಿಗೆ ಪೂಜೆ ಬಿಡದೆ ಯತಿಗಳಿಂದೊಡನೆ ಕೈಕೊಂಬ
ಸಡಗರುಳ್ಳ ಉಘಡ ವಿಜಯ ವಿಜಯವಿಠ್ಠ
ಲೊಡೆಯ ಭಕ್ತರ ಬಿರುದಿನ ಕಡು ಸಾಹಸಮಲ್ಲ ॥ ॥ 3 ॥

## –40–

ರಾಗ ಹಿಂದುಸ್ಥಾನಿ ಕಾಪಿ ಏಕತಾಳ

ಕೃಷ್ಣಾ ನೀ ಬೇಗನೆ ಬಾರೋ ॥ ॥ ಪ ॥
ಬೇಗನೆ ಬಾರೊ ಮುಖವನ್ನೆ ತೋರೊ ॥ ಅ ॥

ಕಾಶೀಪೀತಾಂಬರ ಕೈಯಲ್ಲಿ ಕೊಳಲು
ಪೂಸಿದ ಶ್ರೀಗಂಧ ಮೈಯೊಳಗಮ್ಮ ॥ ॥ 1 ॥

ಕಾಲಲಂದಿಗೆ ಗೆಜ್ಜೆ ನೀಲದ ಬಾವುಲಿ
ನೀಲವರ್ಣನ ನಾಟ್ಯವಾಡುತ ಬಾರೋ ॥ ॥ 2 ॥

ಉಡಿಯಲ್ಲಿ ಉಡುಗೆಜ್ಜೆ ಬೆರಳಲ್ಲಿ ಉಂಗುರ
ಕೊರಳೊಳು ಹಾಕಿದ ವೈಜಯಂತೀ ಮಾಲಾ ॥ ॥ 3 ॥

ತಾಯಿಗೆ ಬಾಯಲ್ಲಿ ಜಗವನ್ನೇ ತೋರಿದ
ಜಗದೋದ್ಧಾರಕ ನಮ್ಮ ಉಡುಪಿ ಶ್ರೀಕೃಷ್ಣ ॥ ॥ 4 ॥

ಎಡದಲ್ಲಿ ಶ್ರೀದೇವಿ ಬಲದಲ್ಲಿ ಭೂದೇವಿ
ನಡುವೆ ಶ್ರೀ ನಾರಾಯಣ ಪುರಂದರವಿಠಲ ॥ ॥ 5 ॥

## -41-

ರಾಗ : ಯಮನ್ ಕಲ್ಯಾಣಿ – ಆದಿತಾಳ

ಕೊಳಲೂದೊ ರಂಗಯ್ಯ ನೀ ।
ಕೊಳಲೂದೊ ಕೃಷ್ಣಯ್ಯ ।। ॥ ಪ ॥

ಕೊಳಲೂದೊ ಗೋವಳರೊಡಗೂಡಿ ।
ಚೆಲುವ ಶ್ರೀ ವೇಣುಗೋಪಾಲ ಕೃಷ್ಣ ನೀ ।।
ಕೊಳಲೂದೊ ॥1॥

ಕಡಲೊಳಗಿದ್ದು ಬಂದ್ದಡಗದೀದಲೀ ।
ಕಡಗೋಲ ಪಿಡಿದ ಉಡುಪಿಯ ಕೃಷ್ಣನೀ ।। ॥ 2 ॥

ಎಂಟು ಮಂದಿ ಯತಿವರ್ಯರು ।
ನಿನ್ನ ಸೇವೆಗೆ ।
ಭಂಟರಾಗಿಹರೊ ವೈಕುಂಠಪತಿಕೃಷ್ಣ ಕೊಳಲೂದೊ ।। ॥ 3 ॥

ನಿಜಭಕ್ತರು । ಕೈ ಬೀಸಿ ಕರೆಯಲು
ರಜತಾಪೀಠದ ಪುರವಾಸ ।
ಕೃಷ್ಣನೀ । ಕೊಳಲೂದೊ ॥ ॥ 4 ॥

ಸತ್ಯವಾದ ಜ್ಞಾನಪೂರ್ಣಾನಂದ ।
ತೀರ್ಥರ ಕರ । ವಶವಾದ ।
ಕೃಷ್ಣನೀ ಕೊಳಲೂದೊ ।। ॥ 5 ॥

ಅಂದಿಗೆ ಕಿರಿಗೆಜ್ಜೆ । ಘಲ್ಲು ಘಲ್ಲೆನ್ನುತ ।
ಕಾಳಿಂಗನಹ್ಡೆಯಲ್ಲಿ । ಕುಣಿದಾಡೊ ।
ಕೃಷ್ಣ ನೀ ಕೊಳಲೂದೊ ।। ॥ 6 ॥
ದಾಸರ ಮನದಭಿಲಾಷೆ । ಪೂರೈಸಿ
ಭೀಮೇಶ ಕೃಷ್ಣನೆ । ದಯಮಾಡೊ ರಂಗನೀ ।
ಕೊಳಲೂದೊ ರಂಗಯ್ಯ ।।

## -42-

ರಾಗ । ಮುಖಾರಿ – ಝಂಪೆತಾಳ

ಕಂಡೆ ಕನಸಿನಲಿ ಕಾರುಣ್ಯ ಮೂರುತಿ ಹರಿಯ ॥ ಪ ॥
ಪುಂಡರೀಕಾಕ್ಷ ಪುರುಷೋತ್ತಮನ ಸಿರಿಯ ॥ ಅ.ಪ ॥

ಚೆಂಡು ರತ್ನದ ತಾಯ್ತು ಮಲಕು ಆರಳೆಲೆ ಹೊನ್ನ – 1
ಗೊಂಡೆಗಳ ಬಿಗಿದು ಶಿಖಿ ದಾರದೆಡೆಯು 11
ದುಂಡುಮಲ್ಲಿಗೆಯು ಪರಿಮಳವ ಘಮ ಘಮಿಪ ಅಳಿ - 1
ಮಿಂಡುಗಳು ಜರಿವಂಥ ನುಳಿಗುರುಳಿಸಿರವ 11 ॥ 1 ॥

ಶಶಿವದನ ನಯನ ನಾಸಾಪುಟದ ಚೆಲುವಿಕೆಯು 1
ನೊಸಲ ಸಿರಿಸಾಮ ಕಸ್ತೂರಿ ತಿಲಕದ 11
ಎಸೆವ ಕುಡಿಹುಬ್ಬುಗಳ ಕುಂಡಲದ ಕಾಂತಿಗಳ 1
ದೆಸೆದೆಸೆಗೆ ಬೆಳಗುತಿಪ ಪರದೀಪ್ತಿಗಳನು ।। 11 2 11

ಕೆತ್ತನಯ ಪದಕ ಕೆಲಬಲಕೆ ಒಲೆದಾಡುತಿಹ ।
ಮುತ್ತು ಮಾಣಿಕದ ಹುಲಿಯುಗುರು ಸರದ 11
ಚಿತ್ತರದ ಹೊನ್ನ ಬಂದಿಯು ಯಣ್ಣುಮಣಿ ಇದರ 1
ಒತ್ತಿನಲಿ ಸಿರಿವತ್ಸ ವೈಯ್ಯಾರದಿರವ ।। 11 3 11

ತೋಳಬಳಿ ತಾಯ್ತು ಕಡಪ್ಪವಳ ಕಂಕಣವಾಕು ।
ನೀಲ ಮಾಣಿಕ್ಯದ ಬೆರಳುಂಗುರಗಳು 11
ನಾಲು ಗಂಟೆಗಳ ರಂಜಿಸುವ ಕಾಂತಿಗಳ ಈ – 1
ರೇಳು ಭುವನಗಳ ಧರಿಸಿದ ಉದರವನು 11 11 4 11

ಬಟ್ಟಿದೊಡೆಗಳಿಗೆ ಬಿಗಿದುಟ್ಟ ಚಲ್ಲಣದ ಪೈಯ ।
ತೊಟ್ಟ ಜರತಾರದಂಗಿಯು ಚರಣದಿ ।।
ಕಟ್ಟಿರುವ ಗೆಜ್ಜೆನರವಣಿ ಕಾಲಕಡಗಗಳ 1
ದಟ್ಟಡಿಯನಿಡುತ ಬಹ ಪುಟ್ಟ ಗೋಪಾಲಕನ 11 11 5 11

ಬಾಲಕನು ಕರೆಯೆ ಬಹುಕಂಬದಲಿ ಬಂದೊಡೆದು 1
ಬಾಲಕನ ತಂದು ಸಾಂದೀಪಗಿತ್ತ ।
ಬಾಲೆ ಚೀರಿದರೆ ಅಕ್ಷಯವಿತ್ತ ದೇವಕಿಯು 1
ಬಾಲಕನ ಬಹು ಬಗೆಯ ಲೀಲೆಗಳನಲ್ಲ 11 11 6 ।।

ಪೊಗಳೆನ್ನಳವಲ್ಲ ಪೊಸ ಬಗೆಯ ಮಹಿಮೆಗಳ 1
ಅಘಹರನ ಅಗಣಿತದ ಗುಣಗಣಗಳ 11
ನಿಗಮ ನಿಕರಕೆ ಮೈಯಗೊಡದ ಉಡುಪಿಯ ಕೃಷ್ಣ – ।
ನೂರುಮಿಗೆಯ ಉನ್ನತದ ವೈಯ್ಯಾರಗಳನು 11 ।। 7 ।

ರಾಗ · ಭೈರವಿ – ತ್ರಿಪುಟತಾಳ

ಕಂಡೆ ಕಂಡೆ । ಕೃಷ್ಣನ । ಕಂಡೆ ಕಂಡೆ ॥ ಪ ॥
ಕಂಡೆ ಕಮಲದಳಾಯತಾಕ್ಷನ
ಪುಂಡರೀಕ ಭವಾದಿ ಪೂಜ್ಯನ
ದಂಡ ಪಾಶಾನ್ವಿತನ ಕೋಟಿ ಪ್ರಾ – ।
ಕಾರ್ಣಂಡ ಸಮ ಸಂಕಾಶವೇಷನ ॥ ಅ.ಪ ॥

ಅರುಣ ಪಂಕಜದಿರವ ಪ್ರೋಲುಪ
ಚರಣ ತಳ ನಖ ಬೆರಳ ಪಂಕ್ತಿಯು
ಶರಧಿ ಜಾನುಗಳೆರಡು ದರ್ಪಣ
ತರದಿ ಶೋಭಿಸೆ ಕರಿಕರೋರುಗಳು
ಉರು ನಿತಂಬದಿ ಮೆರೆವ ಪೀತಾಂ – ।
ಬರದ ನಿರಿ ನಡಗರದಿ ದೈತ್ಯರ ।
ಮರಳುಗೊಳಿಸಿದ ಪರಮ ಪುರುಷನ
ನಿರುತ ಲಂಡಾಪಿಲಿ ದಾಸಪಾಲನ ॥ ॥ 1 ॥

ನಳಿನ ನಿಭಪೂಕ್ಕುಳ ತನೂದರ
ವಳಿಗಳ ತ್ರಯು ಚಲುವ ವಕ್ಷ
ಸ್ಥಳದಿ ಪದ್ಮಾಲಲಸ ಕಾಂಚನ
ಗಳಪ ರೋಮದ ಕಲಿತ ಭುಜಯುಗ
ಕುಲಿಶಪಲ್ದುಮ್ನಗಳು ಪ್ರಮೋತ್ಪತರ್ಣ
ಗಳ ಕಪೋಲ ಪರಿಮಳಿಪ ಚಂಪಕ
ದಳದ ನಾಸಿಕ ಜಲಜಲೋಚನ
ವಿಲಸಿತ ಭ್ರೂ ತಿಲಕ ಫಣೆಯುನು ॥ ॥ 2 ॥

ಪೊಳೆವ ಮಕುಟಪರಳೆಲೆಯು ಮಕರಕುಂ –
ಡಲವು ಮೂಗುತಿಯೊಳ ನಗೆಯು ಮೊಗ –
ಹುಲಿಯುಗರು ಥಳ ಥಳಿಪ ಕೌಸ್ತುಭ
ಹಲರು ಪದಕಾವಳಿಸರಿಗೆ ಶ್ರೀ
ತುಲಸಿ ವನಮಾಲ ಸ್ರಗ್ವಲಯಪದಳಿ ಪಿಂ ।
ದಲಿರಸಾಪ್ವೆಳದಳಯುಗಲುಕರ

ತಳನಗೋವರ ಮಕ್ಕಳೊಡನೆ ಗೋ –
ಕುಲದಿ ಚರಿಸಿದ ಸುಲಲಿತಾಂಗನ ।। ॥ 3 ॥

ಸೇಣು ಕಡೆಗೋಲು ಪಾಣಿ ಪ್ರಥುಂ
ಶ್ರೋಣಿಯಲಿ ಒಡ್ಯಾಣ ನೂಪುರ
ಪ್ರಾಣಮುಖ್ಯರು ಕಾಣಪತಿ ಕ –
ಲ್ಯಾಣದನುದಿನ ಸಾನುರಾಗದಿ
ದೇಸಿಸುವರ ಮನೋನುಕೂಲಿಪ
ಬಾಣ ಗುರುವಿನ ತಾಣಸೆನೆಸಿದ
ಜಾಣ ವರಪುಪುರಾಣ ಪುರುಷನ ॥ ॥ 4 ॥

ಭೂತ ಕೃತ್ಸದ್ಭೂತಿದಾಯಕ
ವೀತಶೋಕ ವಿಧಾತೆ ಮರುತ್ಪುರು –
ಹೂತ ಮುಖವಿಧಾತೆ, ಖರ ಮುರ
ಮಾತುಳಾಂತಕ ಶ್ವೇತವಾಹನ
ಸೂತಗತ ಸಂಕೇತ ತ್ರಿಗುಣಾ
ತೀತ ನಂದನಿಕೇತನದಿ ನವ
ನೀತ ನವಿದ ಪುರಾತನ ಜಗ
ನ್ನಾಥ ವಿಠಲರಾಯ ದೇವನ ।। ॥ 5 ॥

–44–

ಕಾಪಿರಾಗ : ಆದಿತಾಳ

ಕಂಡೆ ಕಂಡೆನು ಕೃಷ್ಣ ನಿನ್ನಯ ।
ಭವ್ಯ ಭಾವದ ಮೂರ್ತಿಯ ॥ ಪ ॥

ಪುಂಡರೀಕ ದಳಾಯತಾಕ್ಷನ ।
ಹಿಂಡು ದೈವದ ಗಂಡನ ।। ಅ.ಪ ॥

ಬಲಿಯ ಮೆಟ್ಟಿದ ಪಾದ ಶೋಭಿಸೆ ।
ಘಲು ಘಲೆನ್ನುವ ಪೈಜಣ ॥
ಉಲಿವಗೆಜ್ಜೆಗಳಿಂದ ಮೆರೆಯುವ ।
ಚೆಲುವ ಕೃಷ್ಣನ ಸೊಂಟವ ।। 1 ।।

ಲಕ್ಷ್ಮಿ ವಕ್ಷಸ್ಥಿತನು ಎನಿಪನ ।
ಅಕ್ಷಯಾಂಬರಪಿತ್ತನ ॥
ಕುಕ್ಷಿಯೊಳು ಜಗಧರಿಸಿ ಮೆರೆವನ ।
ಪಕ್ಷಿವಾಹನದೇವನ ॥ 2 ॥

ವೃಷ್ಣಿಕುಲ ಸಂಭೂತನೆನಿಪನ ।
ಜಿಷ್ಣುವಿಗೆ ಸುಖನೆನಿಪನ ॥
ವಿಷ್ಣುಮೂರುತಿ ವಿಷ್ಟವಶ್ರವ ।
ಕೃಷ್ಣನ ಮಹಾಮಹಿಮನ ॥ ॥ 3 ॥

ಕೊರಳ ಕೌಸ್ತುಭಹಾರ ಶೋಭಿತೆ ।
ಸರಸಿಜಾಸನಧಿಷ್ಟಿತ ॥
ಮೆರವ ತ್ರಿವಳಿಯು ಕಂಠ ಶೋಭಿತ ।
ನರುವ ವೇದಗಳುದ್ಧೃತ ॥ 4 ॥

ತೋಳಬಾಪುರಿ ಬಾಹುಕೀರ್ತಿಯು ।
ಕೈಲಿ ಕಡಗೋಲ್ ಬಲದಲಿ ॥
ಮೇಲೆ ರುಜ್ಜುವ ತಾನೆ ಪಿಡಿದಿಹ
ಕೈಲಿ ಪಾಮದ ಪಾರ್ಶ್ವದಿ ॥ ॥ 5 ॥

ಕರದಿ ಕಂಕಣ ರತ್ನ ಖಚಿತವು ।
ಹರಳು ವಜ್ರದ ಉಂಗುರ ।
ಬೆರಳೊಳಿಟ್ಟಿಹ ದೇವ ಮಹಿಮೆಯು ।
ಸುರರು ಬಹುಪರಿ ತುತಿಪುದೆ ॥ ॥ 6 ॥

ಪಣೆಯೊಳುಪ್ಪುವ ತಿಲಕ ವಿಧೃತೆ ।
ಕರ್ಣಕುಂಡಲ ಭೂಷಿತ ॥
ಮಣಿಯು ಮೌಕ್ತಿಕ ಮಕುಟರಂಜಿತ ।
ಘನ ವಿಭೂಷಣ ಸೇವಿತ ॥ ॥ 7 ॥

ಭುವನಮೋಹನ ದೇವದೇವನ ।
ಪವನನಯ್ಯನು ಎನಿಪನ ॥
ಮಧ್ವಸರಸಿಯು ತಟದಿ ಮೆರೆವನ ।
ಮಧ್ವ ಮುನಿ ಸ್ತುತಿಗೊಲಿದನ ॥ ॥ 8 ॥

ಅಷ್ಟಮಠಗಳ ಯತಿಗಳಿಂದಲಿ
ಸಂಪ್ರಪೂಜಿತ ಚರಣನ ॥
ದಿಟ್ಟ ಗುರುಗೋವಿಂದ ವಿಠಲನ ।
ಸೃಷ್ಟಿಸ್ಥಿತಿಲಯ ಕರ್ತನ ॥ ॥ 9 ॥

## –45–

ರಾಗ ಶಂಕರಾಭರಣ – ರೂಪಕತಾಳ

ಕಂಡು ಧನ್ಯನಾದೆ ನಾ ಉಡುಪಿ ಕೃಷ್ಣನ ಕಣ್ಣಾರೆ ನಾ ।
ಕಂಡು ಧನ್ಯನಾದೆನು ಬ್ರಹ್ಮಾಂಡ ನಖದಿ ಒಡೆದ ಹರಿಯ ।
ತಂಡ ತಂಡದಿ ಪೂಜೆಗೊಳ್ಳುತ ಪಾಂಡವರನು ಸಲಹಿದವನ ॥ ಪ ॥

ಗೆಜ್ಜೆಕಾಲ ಕಡಗವಿಟ್ಟು । ಮಜ್ಜಿಗೆ ಕಡೆಗೋಲು ಪಿಡಿದು ॥
ಹೆಜ್ಜ ಪಂಕ್ತಿ ಊಟ ಉಂಡು । ಗುಜ್ಜುವೇಷ ಧರಿಸಿದವನ ॥ ೧ ॥

ಎಂಟು ಮಠದ ಯತಿಗಳು ತನ್ನ । ಬಂಟರೆಂದು ಪೂಜೆಗೊಳ್ಳುತ
ಕಂಟಕ ಕಂಸಾದಿಗಳನೆ । ದಂಟಿನಿಂದದಿ ಸೀಳಿದವನ ॥ ೨ ॥

ಏನು ಜನ್ಮದ ಸುಕೃತವೊ ಕಮ । ಲೇಶ ವಿಠಲರಾಯ ತನ್ನ ॥
ದಾಸಜನರಭಿಲಾಷೆ ಸಲಿಸಿ । ಕೂಸಿನಂದದಿ ಪೋಷಿಸುವನ ॥ ೩ ॥

## –46–

ರಾಗ ನೀಲಾಂಬರಿ – ಮಿಶ್ರಛಾಪುತಾಳ (ಕಾನಡಾ-ಆದಿ)

ಕಂಡೆ ನಾ ಉಡುಪಿಯ ಕೃಷ್ಣರಾಯನ ಭೂ – ।
ಮಂಡಲದೊಳಗೆ ಉದ್ದಂಡ ಮೋಹಿತನ ॥ ಪ ॥

ಸಮುದ್ರವ ನಾಕಂಡು ಸ್ನಾನಾದಿಗಳ ಮಾಡಿ ।
ಚಂದ್ರಮೌಳೀಶ್ವರನ ಚರಣಕೆರಗೀ ಆ ।
ಮೇಲೆ ನಾ ಬಂದು ಅನಂತೇಶ್ವರನ ಕಂಡು । ಹ ।
ನುಮಂತನ ಪಾಡಿ ಮನದಿನಿಲಿಸಿ ॥ ॥ 1 ॥

ಸುತ್ತು ನದಿಯು ಕಂಡೆ ಸೂರ್ಯ ಪ್ರಭೆಯು ಕಂಡೆ । ಅ ।
ಲ್ಲಿದ್ದ ಮಧ್ವ ಸರೋವರವ ಕಂಡೆ ॥
ಮಧ್ವಮತದ ಅಷ್ಟ ಮುನಿಗಳ ಕಂಡೆ । ಪ್ರ ।
ಸಿದ್ಧನಾದ ಶ್ರೀ ಉಡುಪಿಯು ಕೃಷ್ಣನ ಕಂಡೆ ॥ ॥ 2 ॥

ಉಂಗುರ ಉಡಿದಾರ ಉಡಿಗಂಟೆ ನಾ ಕಂಡೆ ।
ರಂಗುಮಾಣಿಕ್ಯದ ನವರತ್ನಮಾಲೆ ಕಂಡೆ ॥
ಧಿಂ ಧಿಮಿ ಧಿಮಿಕೆಂದು ಕುಣಿವ ಕೃಷ್ಣನ ಕಂಡೆ ।
ಪುರಂದರವಿಠಲನ ಪಾದ ಕಮಲವ ಕಂಡೆ ॥ ॥ 3 ॥

## –47–

ರಾಗ : ಕಾಂಬೋಧಿ – ಆಟತಾಳ

ಕ್ಷೇತ್ರವೆಂದರೆ ಉಡುಪಿಕ್ಷೇತ್ರ ॥ ಪ ॥
ಸೂತ್ರಾಂತರಾತ್ಮಕ ಹರಿಯಾತ್ರೆ ಮಾಡುವಗ ॥ ಅ.ಪ ॥

ವಾಸುದೇವಮುನಿಯು ಪುಟ್ಟ ಪಾಜಕದಲ್ಲಿ ।
ವಾಸುದೇವ ಕೃಷ್ಣನ ನಿಲ್ಲಿಸಿಹರೋ ॥
ಕಾಸುವೀನಕೆ ವರದನಲ್ಲವೊ ಭಕುತಿ ।
ಪಾಶಗಳಿಗೇ ಒಲಿವ ಶ್ರೀಕೃಷ್ಣನಿಲಯು ॥ ॥ 1 ॥

ವಟುತನದೊಳಾಶ್ರಮ ಸ್ವೀಕರಿಸಿ ಸನ್ಯಾಸಿ ।
ಅಷ್ಟಮಠದವರಿಂದ ಇಷ್ಟ ಪೂಜೆಗಳ ॥
ಸೃಷ್ಟಿಯೊಳಗಪ್ರತಿಮ ಕೃಷ್ಣಕೊಳ್ಳುತ ಮನ – ।
ಮುಟ್ಟಿ ಭಜಿಸುವರ ಇಷ್ಟಾರ್ಥಗಳ ಕೊಡುವ ॥ ॥ 2 ॥

ಅನೇಕಾಲಂಕಾರ ಅನವರತ ಸಂಪೂಜೆ ।
ಎಣಿಸಲೆನ್ನಳವಲ್ಲ ರುಕುಮಿಣಿಯು ನಲ್ಲ ॥
ದಿನನಾಥ ನಾಥಗುರು ಗೋವಿಂದ ವಿಠಲನ ।
ಮನದಣಿಯೆ ನೋಳ್ಪುದಕೆ ಘನವಾದ ಸದನ ॥ ॥ 3 ॥

## –48–

ರಾಗ  ರೇಗುಪ್ತಿ – ಆದಿತಾಳ

ಗಾಡಿಕಾರ ಶ್ರೀಕೃಷ್ಣ ರನ್ನ ಬಿಡದಿರೊ ಎನ್ನ ॥ ॥ ಪ ॥
ಬಡವರ ರಕ್ಷಿಪನ್ನ ಅಡಿಗೆರಗುವೆ ನಿನ್ನ ॥ ಅ ಪ ॥

ಕಡಲ ಮಗಳಗಂಡ ಒಡಲೊಳು ತೋರ್ದಜಾಂಡ ।
ಪಿಡಿದ ದಂಡ ದೋರ್ದಂಡ ಬೀಡಿದಿಷ್ಟ ದಾನಶೌಂಡ ॥ ॥ 1 ॥

ಶರಧಿ ಮಧ್ಯದಿ ಪುರವರ ನಿರ್ಮಿಸಿದ ಧೀರ ।
ಈರೇಳು ಭುವನೋದ್ಧಾರ ನೀರದ ಶ್ಯಾಮಲಾಕಾರ ॥ ॥ 2 ॥

ಮಂದಸ್ಮಿತ ಮುಖದಿಂದ ಬಂದು ಉಡುಪಿಲಿನಿಂದ ।
ನಂದನಕಂದ ಮುಕುಂದ ವೃಂದಾರಕೇಂದ್ರ ಗೋವಿಂದ ॥ ॥ 3 ॥

ಭಾವಗೊಲಿದಜೋದ್ಭವ ಭವಸಂಜಾತರಕಾವ ।
ಭವಾಬ್ಧಿತಾರಕದೇವ ಭಾವಿಸುವರ ಸಂಜೀವ ॥ ॥ 4 ॥

ಮಧ್ವಮುನಿಪಸೊಡೆಯ ಶುದ್ಧಯತಿಗಣಪ್ರಿಯ
ಶುದ್ಧವಾದಾಗಮಜ್ಞೇಯ ಮುದ್ದುಹಯವದನರಾಯ ॥ ॥ 5 ॥

## –49–

ರಾಗ  ಮೋಹನ (ಭೈರವಿ) ಛಾಪು (ಧುಮಾಳಿ)

ಗೊಲ್ಲತಿಯರೆಲ್ಲ ಕೂಡಿ ಗೋಪಮ್ಮ ಕೇಳೆ ॥ ಪ ॥
ಕಳ್ಳನೆಂದು ದೂರುತಾರೆ ಎನ್ನಮೇಲೆ
ಇಲ್ಲದ ಸುದ್ದಿಯ ಪುಟ್ಟಿಸಿ ಎನ್ನ ಕೊಲ್ಲಬೇಕೆಂದು ಬಗೆಯ ॥ ಅ.ಪ ॥

ಹರವಿ ಹಾಲ ಕುಡಿಯಲು ಎನ್ನ ಹೊಟ್ಟೆ ।
ಕೆರೆಯೋ ಕೇಳಮ್ಮ ಉಂಟಾದರೆ
ಒರಳಿಗೆ ಕಟ್ಟಮ್ಮಯ್ಯ ॥ ॥ 1 ॥

ಮೊಸಲು ಬೆಣ್ಣೆಯನಾ ಮೆಲುವುದು ಎನಗೆ ।
ದೋಷವಲ್ಲವೇನಮ್ಮಯ್ಯ ॥

ಆಸೆ ಮಾಡಿದರೆ ದೇವರು ಕಣ್ಣ ।
ಮೋಸದಿ ಕುಕ್ಕೋನಮ್ಮಯ್ಯ ॥ ॥ 2 ॥

ಅಟ್ಟವನೇರಿ ಹಿಡಿವುದು ಆದು ಎನಗೆ ।
ಕಷ್ಟವಲ್ಲವೆ ಹೇಳಮ್ಮಯ್ಯ ॥
ಕೊಟ್ಟಹಾಲು ಕುಡಿಯಲಾರದೆ ನಾನು
ಬಟ್ಟಲೊಳಗಿಟ್ಟು ಪೋದೆನೆ ॥ ॥ 3 ॥

ಪುಂಡತನವ ಮಾಡಲು ನಾನು ದೊಡ್ಡ ।
ಗಂಡುನೇನೆ ಹೇಳಮ್ಮಯ್ಯ ॥
ಕಂಡವರು ದೂರುತಾರೆ ಗೋಪಮ್ಮ ನಾನಿನ್ನ ।
ಕಂದನಲ್ಲವೇ ಹೇಳಮ್ಮಯ್ಯ ॥ ॥ 4 ॥

ಉಂಗುರದ ಕರದಿಂದ ಗೋಪಮ್ಮ ತನ್ನ
ಶೃಂಗಾರದ ಮಗನೆತ್ತಿ ।
ರಂಗವಿಠಲನ ಪಾಡಿ ಉಡುಪಿಯ ಉ – ।
ತ್ತುಂಗ ಕೃಷ್ಣನ ತೂಗಿದಳು ॥ ॥ 5 ॥

## –50–

ರಾಗ : ಪೂರವಿ – ಛಾಪುತಾಳ

ಗೋಪ ಗೋಪನೆಂಬ ಕೋಗಿಲೆ ನಮ
ಶ್ರೀಪತಿಯು ಕಂಡರೆ ಬರಹೇಳ ಕೋಗಿಲೆ ॥ ಪ ॥

ಕಂಗಾವಳಿ ಯೂಲದಲಿ (?) ಪಾಂಡುರಂಗ
ಮಂಗಳ ಮೂರುತಿಪ್ಪ
ಶೃಂಗಾರವಾದ ಸುರತರುವಿನ ನೆರಳೊಳು
ರಂಗನಾಥನ ಕಂಡರೆ ಬರಹೇಳೆ ಕೋಗಿಲೆ ॥ 1 ॥

ಮಧುಮಾಸದಲಿ ಮಾಧವನಿರಲು
ಚದುರೆ ಗೋಪಿಯರನ ಮೇಳದಲ್ಲಿ
ಮುದದಿ ವಸಂತರಸನಾಡುವ ಭರದಿಂದ
ಪದುಮನಾಭನ ಕಂಡರ ನೀ ಬರಹೇಳೆ ॥ 2 ॥

ಅಟ್ಟಿ ಅರಸುವ ಶ್ರುತಿಗಳೀದ ನಾಚಿ
ಬಿಟ್ಟವೆಂದರವ ಪರಬ್ರಹ್ಮ
ಸೃಷ್ಟಿಯೊಳು ಉಡುಪಿನ ಹಯವದನಸ್ವಾಮಿ
ದೃಷ್ಟಿಲಿ ಕಂಡರೆ ಬರಪೇಳೆ ಕೂಗಿರೆ ॥ 3 ॥

## –51–

ರಾಗ ಶ್ರೀ – ಆದಿತಾಳ

ಚರಣವ ತೋರೋ 1
ಚರಣವ ತೋರೋಯದುವರ ಅರಸನೆ ಚರಣವತೋರೋ ॥ ಪ ॥
ಸ್ಮರಣೆ ಮಾತ್ರದಿ ಮುಕುತಿ ತೋರುವ ಚರಣವತೋರೋ ॥ಅ ಪ॥

ಗೋಕುಲ ಭೂಮಿಯು ಪಾವನ ಮಾಡಿದ ಚರಣವತೋರೋ 1
ಲೋಕವನೆಲ್ಲ ಅಡಗಿಸಿಕೊಂಡ ಚರಣವತೋರೋ ॥ 11 1 11

ಬಿಡದೆ ಸರ್ವಜ್ಞ ತೀರ್ಥರಿಗೊಲಿದು ಚರಣವ ತೋರೋ 1
ಒಡವರ ಆಧಾರ ದಿವ್ಯ ವಿಭೂಷಣ ಚರಣವ ತೋರೋ 11 11 2 11

ಕಡುಮುದ್ದು ವಿಜಯ ವಿಠಲ ನಿನ್ನ ಚರಣವ ತೋರೋ 1
ಉಡುಪಿಯ ಕ್ಷೇತ್ರದಲಿ ।
ನಿಂದು ಪೂಜೆಯಗೊಂಬ ಚರಣವ ತೋರೋ 11 11 3 11

## –52–

ರಾಗ : ಮೋಹನ – ಆದಿತಾಳ

ಜಯ ಮಧ್ವವಲ್ಲಭ ಜಯ ಶುದ್ಧ ಸುಲಭ
ಜಯ ಪದ್ಮನಾಭ ಉಡುಪಿನ ॥
ಜಯ ಪದ್ಮನಾಭ ಉಡುಪಿನ ಶ್ರೀಕೃಷ್ಣ
ಜಯ ದುರ್ಜನರಿಗೆ ಅತಿದೂರ 11 ಸುವ್ವಿ ಸುವ್ವಿ 11 11 ಪ 11

ಸುರರ ಶಿರೋರನ್ನ ಗರುಡವಾಹನನೆ
ಕರುಣಾಸಂಪನ್ನ ಉಡುಪಿನ 11
ಕರುಣಾಸಂಪನ್ನ ಉಡುಪಿನ ಶ್ರೀಕೃಷ್ಣ

ಶರಣಾಗೊ ಧನ್ಯ ಜನರಿಗೆ ॥ ॥ 1 ॥

ಮೇಲೆ ಸತ್ಯಲೋಕವ ಆಳುವ ಧೀರನೆ
ಶ್ರೀಲೋಲನಂಘ್ರಿ ಭ್ರಮರನೆ ॥
ಶ್ರೀಲೋಲನಂಘ್ರಿ ಭ್ರಮರನೆ ಮುಖ್ಯಪ್ರಾಣ
ಇಳಾದೇವಿ ರಮಣಗೆರಗುವೆ ॥ ॥ 2 ॥

ರಾಮಾಂಘ್ರಿ ಸೇವೆಯ ಪ್ರೇಮದಿ ಮಾಡಿದ
ಶ್ರೀಮಂತ ನಮ್ಮ ಹನುಮಂತ ॥
ಶ್ರೀಮಂತ ನಮ್ಮ ಹನುಮಂತನೆಂದವಗೆ
ಕಾಮಿತಾರ್ಥಗಳ ಕೊಡುವನು ॥ ॥ 3 ॥

ಭಾರತ ಯುದ್ಧದಲಿ ಬಾಹುಬಲತೋರಿದ
ಧಾರಣೇಶ್ವರ ತಿಲಕನೆ ॥
ಧಾರಣೇಶ್ವರ ತಿಲಕನೆ ಶ್ರೀ ಭೀಮ
ಸಾರಿದ ಜನರ ಸಲಹುವ ॥ ॥ 4 ॥

ಶುದ್ಧ ಶಾಸ್ತ್ರಗಳಿಂದ ಗೆದ್ದು ವಾದಿಗಳ ಹೊಂ-
ದಿದ್ದ ಜನರ ಸಲಹುವ ॥
ಹೊಂದಿದ್ದ ಜನರ ಸಲುಹುವ ಶ್ರೀಗುರು
ಮಧ್ವಮುನಿವನ ಬಲಗೊಂಬೆ ॥ ॥ 5 ॥

ಹರಿಯು ಕರುಣದಿಂದ ಕರಣಂಗಳೊಡನೆ
ದುರುಳವಾದಿಗಳ ಗೆಲಿದನ ॥
ದುರುಳವಾದಿಗಳಗೆಲಿದನೆ ಹೃಷಿಕೇಶ
ಗುರುಗಳಂಘ್ರಿಗೆ ನಮಿಸುವೆ ॥ ॥ 6 ॥

ದೇಶದೇಶಂಗಳೊಳು ದೋಷಿವಾದಿಗಳ
ದೂಷಿಸಿ, ಹರಿಯು ಮಹಿಮೆಯು ॥
ದೂಷಿಸಿ, ಹರಿಯು ಮಹಿಮೆಯು ಮೆರೆಸಿದ
ನೃಸಿಂಹ ತೀರ್ಥರೆನೆದರೆ ॥ ॥ 7 ॥

ಅದ್ವೈತವಾದಿಗಳ ಗೆದ್ದು ನಿರ್ಮಲವಪ್ಪ
ಮಧ್ವಮಾರ್ಗವನು ಜಗಕೆಲ್ಲ ॥

ಮಧ್ವಮಾರ್ಗವನು ಜಗಕೆಲ್ಲ ತೋರಿದ ಜ-
ನಾರ್ದನ ತೀರ್ಥರೆನೆದರೆ ॥ ॥ 8 ॥

ಇಂದಿರೆಯರಸನ ಎಂದೆಂದು ಸ್ತುತಿಸಿ
ಮಂದ ಮಾಯ್ಗಳ ಕುಮತವ ॥
ಮಂದ ಮಾಯಿಗಳ ಕುಮತವಗೆಲಿದ ಉ-
ಪೇಂದ್ರ ತೀರ್ಥರೆನದರ ॥ ॥ 9 ॥

ಈ ಮಹಿಯೊಳಗುಳ್ಳ ತಾಮಸ ಜನರನ್ನು
ಶ್ರೀ ಮಧ್ವಮುನಿಪನ ಮತದಿಂದ ॥
ಶ್ರೀ ಮಧ್ವಮುನಿಪನ ಮತದಿಂದ ಖಂಡಿಸಿ
ವಾಮನ ತೀರ್ಥರೆನೆವರೆ ॥ ॥ 10 ॥

ಧೀರ ತಾಪಸರಾಗಿ ಗುರುಮಧ್ವಮುನಿಯ
ಚಾರು ಚರಣಂಗಳ ಬಿಡದಿದ್ದ ॥
ಚಾರು ಚರಣಂಗಳ ಬಿಡದಿದ್ದ ಶ್ರೀ ವಿಷ್ಣು
ತೀರ್ಥರಡಿಗೆ ನಮಿಸುವೆ ॥ ॥ 11 ॥

ಕಾಮನಸರೆಯಟ್ಟಿ ಶ್ರೀ ಮಹಾವಿಷ್ಣುವೆ
ಸ್ವಾಮಿಯೆಂಬುದನು ಜಗಕೆಲ್ಲ ॥
ಸ್ವಾಮಿಯೆಂಬುದನು ಜಗಕೆಲ್ಲ ತೋರಿದ
ರಾಮತೀರ್ಥರೆನೆದರೆ ॥ ॥ 12 ॥

ಮನುಮಥನಯ್ಯನ ಘನತೆಯ ತೋರಿಸಿ
ಜನರ ಮೋಹಂಗಳ ಬಿಡಿಸಿದ ॥
ಜನರ ಮೋಹಂಗಳ ಬಿಡಿಸಿದ ಅದೋಕ್ಷಜ
ಮುನಿಕುಲಾಗ್ರಣಿಗೆ ನಮಿಸುವೆ ॥ ॥ 13 ॥

ಮಧ್ವಕಿಂಕರರಾದ ಪದ್ಮನಾಭಾರ್ಯರ
ವಿದ್ಯಾವೈಭವಗಳ ಪೊಗಳುವ ॥
ವಿದ್ಯಾವೈಭವಗಳ ಪೊಗಳುವ ಕವಿಯಾರು
ಶುದ್ಧ ಮುನಿಗಳಿಗೆ ಅಳವಲ್ಲ ॥ ॥ 14 ॥

ದೇವ ಹಯವದನನ ಆವಾಗಲು ಪೂಜಿಪ
ಪಾವನ ಮಧ್ವ ಮುನಿಪನ ॥

ಪಾವನ ಮಧ್ವ ಮುನಿಪನ ಶಿಷ್ಯರಾದ
ದೇವತಾಂಶಗಳ ಪೊರೆ ಹೊಕ್ಕೆ ॥ ॥ 15 ॥

## –53–

ರಾಗ ಸೌರಾಷ್ಟ್ರ ಭೈರವಿ – ಛಾಪುತಾಳ

ಜಯ ಮಂಗಳಂ ನಿತ್ಯ ಶುಭ ಮಂಗಳಂ

ಇಂದೀವರಾಕ್ಷಗೆ ಇಭರಾಜಗೊಲಿದಗೆ
ಇಂದಿರಾರಮಣ ಗೋವಿಂದ ಹರಿಗೆ ।
ನಂದನ ಕಂದಗೆ ನವನೀತ ಚೋರಗೆ
ವೃಂದಾರಕೇಂದ್ರ ಉಡುಪಿಯಕೃಷ್ಣಗೆ ॥ ॥ 1 ॥

ಕ್ಷೀರಾಬ್ಧಿವಾಸಗೆ ಕ್ಷಿತಿಜನರ ಪಾಲಗೆ
ಮಾರನನುಪಡೆದ ಮಂಗಳಮೂರ್ತಿಗೆ ।
ಚಾರುಚರಣದಿಂದ ಚಲುವ ಗಂಗೆಯಪಡೆದ
ಕಾರುಣ್ಯಮೂರ್ತಿ ಕೌಸ್ತುಭಧಾರಗೆ ॥ ॥ 2 ॥

ವ್ಯಾಸಾವತಾರಗೆ ವೇದಉದ್ಧಾರನಿಗೆ
ವಾಸಿತಾನಂತಪದ ಸಕಲೇಶಗೆ ।
ವಾಸುದೇವ ಮೂರ್ತಿ ಪುರಂದರವಿಠ್ಠಲಗೆ
ದಾಸರನು ಕಾಯ್ವ ರುಕ್ಮಿಣಿರಮಣಗೆ ॥ ॥ 3 ॥

## –54–

ರಾಗ ನವರೋಜು – ಆಟತಾಳ

ಜೋಜೋ ಕಂದರ್ಪಕೋಟಿ ಲಾವಣ್ಯ ॥ ಪ ॥

ಜೋಜೋ ವೃಂದಾರಕ ಶಿರೋರನ್ನ
ಜೋಜೋ ನಂದನ ಸುಕೃತದ ಫಲವೆ
ಜೋಜೋ ಮುನಿಮನ ಮಧುಪಕಮಲವೆ ॥ ॥ ಅ ಪ ॥

ಪ್ರಳಯ ಜಲಧಿ ನೀನಾಲದೆಲೆಯ ಮೇಲೆ

ಹಲವು ಜೀವರು ನಿನ್ನ ಉದರದೊಳಿರಲು
ಕೆಲವು ವಿನದಿ ಯೋಗ ನಿದ್ರೆಯೊಳಗಿರಲು
ಒಲವಿಂದ ಸೃಜಿಸುವೆನೆಂದು ಯೋಚಿಸಿದೆ ॥ ॥ 1 ॥

ಪ್ರಕೃತಿಯ ಮೂಲಕಾರಣವನ್ನ ಮಾಡಿ
ಸಕಲ ತತ್ವಗಳ ಸಮ್ಮೇಳದಿ ಕೂಡಿ
ವಿಕಲಿಸದಂತೆ ತನ್ಮಾತ್ರೆಯ ಹೂಡಿ
ಅಖಿಲೇಶ ಮಹತ್ತತ್ವಗಳ ನಿರ್ಮಿಸಿದೆ ॥ ॥ 2 ॥

ಮಹತ್ತತ್ವದಿಂದ ಅಹಂಕಾರ ಹುಟ್ಟಿ
ಅಹಂಕಾರದಿಂದ ವೈಕಾರಿಕ ಮೊದಲಾದ
ತ್ರಿವಿಧ ತತ್ವಗಳ ನಿರ್ಮಾಣವ ಮಾಡಿ
ಮಹಾಮಹಿಮಯ ಮೆರೆದ ಜಗವರಿಯೆ ॥ ॥ 3 ॥

ಇಪ್ಪತ್ತನಾಲ್ಕು ಐದಾರು ತತ್ವಗಳಿಂದ
ತಪ್ಪದೆ ಬ್ರಹ್ಮಾಂಡವ ನಿರ್ಮಿಸಿದೆ
ಅಪ್ಪಶಯನನಾಗಿ ನಾಭಿಕಮಲದಿಂದ
ಅಪ್ಪ ಬಹ್ಮನ ಪ್ರಸವಿಸಿದ ನೀನೆಂದು ॥ ॥ 4 ॥

ಒಂದು ಮೂರುತಿಯಿಂದ ಸೃಷ್ಟಿಯ ಮಾಡಿ ಮ-
ತ್ತೊಂದು ಮೂರುತಿಯಿಂದ ಪಾಲನೆ ಮಾಡಿ
ಒಂದು ಮೂರುತಿಯಿಂದ ಸಂಹಾರವನು ಮಾಡಿ
ಒಂದೊಂದು ಮಹಿಮೆಯನಂತಾದ್ಭುತವೊ ॥ ॥ 5 ॥

ಒಂದು ರೋಮಕೂಪದಲಿ ಬ್ರಹ್ಮಾಂಡವ
ಇಂದಿರೆ ಅನಂತಾನಂತ ಕೋಟಿಗಳು
ಬಂದು ಗೋಕುಲದಲಿ ಶಿಶುವಾಗಿ ತೋರಿದೆ ಆ-
ನಂದದಿಂದಲಿ ಶರಣೆಂದರು ಸುರರು ॥ ॥ 6 ॥

ಬೊಮ್ಮರುದ್ರಾದಿ ದೇವತೆಗಳಿಗವಸರ
ಒಮ್ಮೆ ಕಾಣರು ಸಿರಿರಮ್ಮೆ ಚೆಲುವನ
ಒಮ್ಮನದಿಂದ ನೋಡೇನೆಂಬ ಭರದಿಂದ
ರಮ್ಮೆ ಮುಖವ ತಗ್ಗಿಸಿ ನುಡಿದಳು ॥ ॥ 7 ॥

ಜನನ ಮರಣ ಭಯದಿಂದ ದೇವತೆಗಳು

ಅನುದಿನ ನಿನ್ನ ಪೂಜೆಯ ಮಾಡುತಿರಲು
ಪುನರಾವೃತ್ತಿರಹಿತವಾದ ಫಲವಿತ್ತೆ
ಮನುಜಸಂತೆ ತೋರುವದೇನು ವಿಚಿತ್ರ ॥ ॥ 8 ॥

ಆಲೋಚನೆಯಿಂದ ಸರ್ವವಿಷಯಗಳ
ಲೀಲೆಯಿಂದಲಿ ಮಾಡೆ ಕಮಲಸಂಭವನ
ಪೋಲು ಮಾಡದಂತೆ ಒಳಿತಾಗಿ ತಲೆಬಾಗೆ
ಮೂಲೋಕವ ಕೃಪೆಯಿಂದ ಪಾಲಿಸಿದೆ ॥ ॥ 9 ॥

ದಶದಿಕ್ಕು ನೋಡುತ್ತ ಭಯದಿಂದ ಕಮಲಜ
ಬಿಸಜನಾಳದೊಳು ದಾರಿಯ ಕಾಣದೆ
ದಶಶತವರುಷ ನಿಮ್ಮನು ಧ್ಯಾನಿಸುತಿರೆ
ವಸುಧೇಶ ನಿಮ್ಮ ನಿಜವ ತೋರಿದಿರಿ ॥ ॥ 10 ॥

ನಂದಯಶೋದೆ ವಸುದೇವ ದೇವಕಿಯರು
ಹಿಂದೆ ಮಾಡಿದ ಸುಕೃತ ಫಲವಾಯಿತೆಂದು
ಇಂದಿರಾಪತಿ ಜನಿಸಿದನೆಂದು ಹರುಷದಿ
ಬಂದ ಬ್ರಾಹ್ಮಣರ ದ್ರವ್ಯದಿ ದಣಿಸಿದರು ॥ ॥ 11 ॥

ಜಾತಕರ್ಮವ ಮಾಡಿ ಮಧುವ ಬಾಯೊಳಗಿಟ್ಟು
ಪೊತ್ತು ಮೊರದಗೊಟ್ಟಿನಲಿ ಮಲಗಿಟ್ಟು
ನಾಥ ನಾರಾಯಣನವತಾರವೆಂದು
ಮಾತೆಯು ಮೊಲೆಹಾಲನುಂಡ ಬೇಗದಲಿ ॥ ॥ 12 ॥

ನಾಮಕರಣದಿವಸ ಬ್ರಹ್ಮಾದಿಸುರರು
ಈ ಮಹಾಶಿಶುವ ನೋಡೇನೆಂಬ ಭರದಿಂದ
ಆ ಮಹಾಸ್ತೋಮವೆಲ್ಲವು ಕೂಡಿಬಂದು
ಈ ಮಹಾಶಿಶುವ ನೋಡಿದರರ್ತಿಯಲಿ ॥ ॥13॥

ವ್ಯಾಸ ಧೌಮ್ಯಾಚಾರ್ಯರ ಒಲಿದ ಮಂತ್ರಗಳಿಂದ
ಸಾಸಿರಕೋಟ್ಯನಂತೆ ನಾಮಗಳುಳ್ಳ (ವಗೆ)
ವಾಸುದೇವ ಕೃಷ್ಣನೆಂಬ ನಾಮವನಿಟ್ಟು
ಸೂಸಿದರಕ್ಷತೆಯ ಸುಮುಹೂರ್ತದಲಿ ॥ ॥ 14 ॥

ಈರಾರು ದಿನದಲ್ಲಿ ಭಾರತಿ ಪಾರ್ವತಿ
ಓರಂತೆ ನಾಲ್ಕು ವೇದಗಳ ಪಠಿಸ ಮಾಡಿ
ಧೀರ ಶೇಷನು ಬಂದು ಹಾಸಿಗೆಯಾಗಲು
ನಾರಿಯರೊಡನೆ ಮಲಗಿದೆಯಾ ಹಯವದನ ॥ ॥ 16 ॥

ಪುಟ್ಟ ಪಾದದಲೊಮ್ಮೆ ತೊಟ್ಟಿಲನೊದೆಯುತ್ತ
ದುಷ್ಟ ಶಕಟ ನುಚ್ಚು ನುರಿಯಾಗಿ ಬೀಳೆ
ಕಟ್ಟಿದ ಒರಳೊಳು ಮರಗಳೆರಡು ಬೀಳೆ
ಕಟ್ಟೆವೆಂದರು ಗೋವಳರು ಗೋಪಿಯರು ॥ ॥ 17 ॥

ಸಿರಿಬಾಗ್ಯ ರೌಪ್ಯಪುರದೊಳು ಹೆಚ್ಚಲೆಂದು
ವರಮುನಿಗಳೆಲ್ಲ ಪೂಮಳಗರೆಯೆ
ವರಋಷಿಗಳೆಲ್ಲರು ಶಿರಗಳ ತೂಗೆ
ಗುರುವಾದಿರಾಜರಿಗೊಲಿದ ಹಯವದನ ॥ ॥ 18 ॥

–55–

ರಾಗ ರೇಗುಪ್ತಿ ಆದಿತಾಳ

ತಂದು ತೋರೆಲೆ ಶ್ರೀ ಮುಕುಂದನ । ಗೋವಿಂದನ ॥ ॥ ಪ ॥
ಎಂದೆಂದುಡುಪಿಲಿನಿಂದನ । ಗೋವಿಂದನ ॥ ಪ ॥

ಧಂಡಪಾಶಧರನು ಭೂಮಂಡಲದಿ ಮುನಿಗಳ
ಹೆಂಡಿರಿತ್ತ ಭಿಕ್ಷೆಯುಂಡನ ಚೆಲ್ವ
ಕುಂಡಲಮಂಡಿತ ಗಂಡನ ಉ –
ದ್ಧಂಡ ಕರೂರ ಪ್ರಚಂಡನ । ಗೋವಿಂದನ ॥ 1 ॥

ಹಾರ ಪದಕ ಕಂಕಣ ಕಿರುಗೆಜ್ಜೆ ಉಡು–
ದಾರ ನೀರ ಪೆಂಡೆಗಳಿಟ್ಟನ ತನ್ನ
ನೇರ್ದರಿಗಿಷ್ಟವ ಕೊಟ್ಟನ
ನೀರಸ ಜನರ ಬಿಟ್ಟನ ಗೋವಿಂದನ ॥ ॥ 2 ॥

ಮಂದಹಾಸವೆಂಬ ನವಚಂದ್ರಿಕೆಯಿಂದೆಸೆವ ಮುಖ
ಇಂದುವಿನ ನೀರಜಾಕ್ಷನ ನವ

ಚಂದನ ಚರ್ಚಿತ ವಕ್ಷನ
ಎಂದೆಂದು ಭಕ್ತರ ವಕ್ಷನ ಗೋವಿಂದನ ॥ ॥ 3 ॥

ಮಂದಜಾಂಡಾದಿಂದ್ರ ಮುಖ್ಯ ವೃಂದಾರಕರೊಡೆಯನ
ಇಂದಿರೆಯಪ್ಪುವ ತೋಳ್ಗಳ ಶುಭ
(ಕುಂದಕುಟ್ಮಲ) ಪಲ್ಗಳ
ಅಂದುಗೆ ಒಪ್ಪುವ ಕಾಲ್ಗಳ ಗೋವಿಂದನ ॥ ॥ 4 ॥

ಇಂದು ಹಯವದನ್ನ ಸಂದೇಹವ ಕಳೆಯುತ್ತ ಆ–
ನಂದದಿಲ್ಲಿಗೆ ಬಂದನ
ಚಂದದಿವೇದವ ತಂದನ ಆ–
ನಂದನ ರಾಣಿಯು ಕಂದನ ಗೋವಿಂದನ ॥ ॥ 5 ॥

–56–

ರಾಗ ಹಿಂದುಸ್ಥಾನಿ ಕಾಪಿ ಆದಿತಾಳ

ನಗುವರಲ್ಲೋ ರಂಗಯ್ಯ ನಿನ್ನಾಟವ ಕಂಡು । ॥ ಪ ॥
ಹಗರಣವಾಗಿದೆ ಎನಗೆ ನಿಗಮಗೋಚರನೆ ॥ ಅ ॥

ನಿಗಮವನ್ನು ತರಲು ಮತ್ಸ್ಯಾಕೃತಿಯ ತಾಳಿದೆ ।
ನಗವನೆತ್ತಿ ಕೂರ್ಮನೆಂಬ ಹೆಸರ ಧರಿಸಿದೆ ॥
ಜಗತಿಯನ್ನು ತರಲು ವರಾಹ ಮೂರ್ತಿಯೆನಿಸಿದೆ ।
ಮಗುವಿಗಾಗಿ ಘೋರಾಕೃತಿ ನರಮೃಗನೆನಿಸಿದೆ ॥ ೧ ॥

ಹೆಡೆಮುಡಿಕಟ್ಟಿ, ದಾನವ ಕೊಟ್ಟ ಬಲಿಯ ಭಂಗಿಸಿದೆ ।
ಪಡೆದ ತಾಯಿ ಶಿರವ ಕಡಿದು ನ್ಯಾಯವೆನಿಸಿದೆ ॥
ಮಡದಿಗಾಗಿ ಮರ್ಕಟರ ಹಿಂಡು ಕೂಡಿಸಿದೆ ।
ಕಡಲಕಟ್ಟಿ ಕಪಿಗಳಿಂದ ಧುರವ ಜೈಸಿದೆ ॥ ೨ ॥

ಅಷ್ಟಮಿಯೊಳರ್ಧ ರಾತ್ರಿ ಜನಿಸಿದೆ ।
ದುಷ್ಟ ಕಂಸನು ಹಾಕಿದ ಸೆರೆಯ ಬಾಗಿಲು ತೆಗೆಸಿದೆ ॥
ದಿಟ್ಟನಸ ಗೋಕುಲದಲ್ಲಿ ಬಂದು ನಲಿಸಿದೆ ।
ನೃಪ್ತಸಿ ಚಂಡಿಕೆಯ ಖಳನ ಮುಂದೆ ನಿಲ್ಲಿಸಿದೆ ॥ ೩ ॥

ನಂದಗೋಪ ತನಗೆ ಕಂದನಾದನು ಎಂದು ।
ಎಂದು ಕಾಳಿಂದಿಯೊಳು ಮಿಂದಿರಕ ಬಂದು ॥
ಚಂದದಿಂದ ಜಾತಕರ್ಮ ಮಾಡಿಸಿಕೊಂಡು ।
ಬಂದ ಬ್ರಾಹ್ಮಣರಿಗೆ ದಕ್ಷಿಣ ಕೊಟ್ಟು ಅಂದು ॥ ೪ ॥

ಬನ್ನೆಸಿ ಮಕ್ಕಳ ಕರವ ಪನ್ನೆಯಿಂದಿಸಿದೆ ।
ಚಿನ್ನಿಕೋಲು ಚಂಡು ಬುಗುರಿ ಗಜ್ಜುಗವಾಡಿದೆ ॥
ಕಣ್ಣುನಸ್ನ ಮಾಡಿ ಅವರ ಕಾಕು ಮಾಡಿದೆ ।
ಮಣ್ಣು ತಿಂದು ಬಾಯೊಳು ಬ್ರಹ್ಮಾಂಡ ತೋರಿದೆ ॥ ೫ ॥

ಗೊಲ್ಲರ ಮನೆಗೆ ನೀನು ಮೆಲ್ಲನೆ ಪೋಗಿ ।
ಚಲ್ಲಿ ಹಾಲುಮೊಸರು ಬೆಣ್ಣೆ ಸೂರೆ ಮಾಡಿದೆ ॥
ವಲ್ಲಭೆಯರ ಕೂಡೆ ನೀನು ಸರಸವಾಡಿದೆ ।
ಮೊಲ್ಲೆ ಮಲ್ಲಿಗೆಯ ಅರಳ ಮುಡಿಗೆ ಮುಡಿಸಿದ ॥ ೬ ॥

ಬಾಲಕರ ಕೂಡೆ ಮೊಸರ ಭಾಂಡ ಒಡೆಸಿದೆ ।
ಹಾಲು ಮೊಸರು ಬೆಣ್ಣೆ ಕದ್ದು ಕಳ್ಳನೆನಿಸಿದೆ ॥
ಬಾಲೆಯರ ವಸ್ತ್ರವ ಕೊಂಡು ಮರವೇರಿದೆ ।
ಕಾಲಾಹಿ ವೇಣಿಯರೊಡಗೂಡಿ ರಮಿಸಿದೆ ॥ ೭ ॥

ತುರುಗಳ ಹಿಂಡನು ನಡೆಸಿ ವನವ ಚರಿಸಿದ ।
ಮೊರಡು ಮುದುಕಿ ಕುಬುಜೆಯುನ್ಮಾದರದಿ ಕೂಡಿದೆ ॥
ಕರುಣ ಎಷ್ಟಿಲ್ಲದೆ ಸೋದರಮಾವನ ಮಡುಹಿದೆ ।
ನರನ ರಥಕೆ ಬೋವನಾಗಿ ಕುದುರೆ ನಡೆಸಿದೆ ॥ ೮ ॥

ತರುಣಿಯರ ವ್ರತವ ಕೆಡಿಸಿ ಬತ್ತಲೆ ನಲಿಸಿದೆ ।
ತುರುಗವನೇರಿ ಕಲ್ಕಿಯಾಗಿ ಖಡ್ಗವ ಧರಿಸಿದೆ ॥
ಗುರು ಮಧ್ವರಾಯರಿಗೊಲಿದು ಉಡುಪಿಲಿ ನೆಲೆಸಿದೆ ।
ಪುರಂದರ ವಿಠ್ಠಲನೆ ನೀ ನಮಗೆ ಗತಿಯಾದೆ ॥ ೯ ॥

–57–

ರಾಗ : ಬಿಲಹರಿ – ಅದಿತಾಳ

ನಿನ್ನ ಮಗನೇನೆ ಗೋಪಿ ॥ ಪ ॥
ಚೆನ್ನಾರಿ ಚೆಲುವಿನ ಉಡುಪಿನ ಕೃಷ್ಣರಾಯ ॥ ಅ.ಪ ॥

ಮುಂಗುರುಳು ಮುಂದಲೆಗೆ ಭಂಗಾರದರಳೆಲೆ ।
ರಂಗು ಮಾಣಿಕ್ಯದುಂಗುರವಿಟ್ಟು ॥
ಪೊಂಗೆಜ್ಜೆತೊಡರು ಅಂದುಗೆ ಘಿರಲು ಘಿರಲುರನೆ ।
ಅಂಗಳದಲ್ಲಾಡುವ ಈ ಮುದ್ದು ಬಾಲ ॥ 1 ॥

ಕಟವಾಯ ಬೆಣ್ಣೆ ಕಾಡಿಗೆಗಣ್ಣು ಕಟಿಸೂತ್ರ ।
ಪಟವಾಳಿ ಕೌಪೀನ ಕೊರಳಲ್ಲಿ ಪದಕ
ನಟೆಯಲ್ಲ ಬ್ರಹ್ಮಾಂಡ ಉದರದೊಳಿಟ್ಟು ।
ಮಿಟ ಮಿಟನೆ ನೋಡುವನೀ ಮುದ್ದುಬಾಲ ॥ ॥ 2 ॥

ಹರಿವಹಾವನು ಕಂಡು ಹಡೆಹಿಡಿದಾಡುವ ।
ಕರುವಾಗಿ ಆಕಳ ಮೊಲೆಯುಂಬುವ ।
ಹಿರಿದಾಗಿ ನೋಡಲು ಅಂತರಂಗವಸ್ವಾಮಿ ।
ಧರೆಯೊಳಂಬುಧಿ ತೀರ ಉಡುಪಿ ಶ್ರೀಕೃಷ್ಣ ॥ ॥ 3 ॥

## –58–

ರಾಗ : ಆನಂದಭೈರವಿ – ಆದಿತಾಳ

ನೀರೆ ತೋರೆಲೆ ನೀರೆ ತೋರೆಲೆ
ನೀಲವರ್ಣದ ದೇವನ ॥
ಬಾಲೆ ತೋರಲೆ ಬಾಲೆ ತೋರೆಲೆ
ಬಾಲ ಉಡುಪಿನ ಕೃಷ್ಣನ ॥ ॥ ಪ ॥

ಕಾಲಲಂದುಗೆ ಕಡಗಕಂಕಣ
ಲೋಲ ಉಡುಪಿಗೆ ಬಂದನ ॥
ಬಾಲ ಲೀಲೆಯ ಜಗಕೆತೋರ್ದ ಗೋ–
ಪಾಲ ಉಡುಪಿನ ಕೃಷ್ಣನ ॥ ॥ 1 ॥

ಕಡೆವ ಕಡೆಗೋಲು ನೇಣು ಸಹಿತಲೆ
ಹಡಗಿನೊಳಗಿಂದ ಬಂದನ ॥
ಬಿಡದೆ ಭಕ್ತರ ಒಡನ ಪಾಲಿಪ ಒಡೆಯ ಉಡುಪಿನ ಕೃಷ್ಣನ ॥ 2 ॥

ಮುದ್ದು ಮುಖದವ ಮೂರು ಜಡೆಯವ
ಇದ್ದ ಉಡುಪಿನ ಸ್ಥಳದಲಿ ॥

ಒದ್ದು ಶಕಟನ ಆದಿಗುರುಗಳ
ಮುದ್ದು ಉಡುಪಿನ ಕೃಷ್ಣನ ॥ ॥ 3 ॥

ಮಲ್ಲರೊಡಗೂಡಿ ಮಧುರಾಪುರದಲಿ
ಬಿಲ್ಲಹಬ್ಬವ ನಡೆಸಿದ ॥
ಬಲ್ಲಿದ ಕಂಸಾಸುರನ ಮಡುಹಿದ
ಮಲ್ಲ ಉಡುಪಿನ ಕೃಷ್ಣನ ॥ ॥ 4 ॥

ಬಾಲ ಸನ್ಯಾಸಿಗಳು ಚಿನ್ನನು
ಪ್ರೇಮದಿಂದಲಿ ಭಜಿಸಲು ॥
ಆಲದೆಲೆಯ ಮೇಲೆ ಮಲಗಿದ ಗೋ–
ಪಾಲ ಉಡುಪಿನ ಕೃಷ್ಣನ ॥ ॥ 5 ॥

ಅದ್ವಯ ಪರ ಬ್ರಹ್ಮ ವಲ್ಲಭ
ವಿದ್ಯಾಸಾರಥಿ ಮಾಡಿದ ॥
ಸದ್ಗುರು ಮುನಿ ವಾದಿರಾಜರ
ಮುದ್ದು ಉಡುಪಿನ ಕೃಷ್ಣನ ॥ ॥ 6 ॥

–59–

ರಾಗ ಕಾಂಬೋದಿ – ತ್ರಿಪುಟತಾಳ

ನುಡಿಯಲಾಲಿಸು ಮಾಧವ ॥ ಪ ॥

ನುಡಿಯಲಾಲಿಸು ಪಾಲ । ಕಡಲ ಶಯನದೇವ ।
ಕಡೆಗೋಲ ಪಿಡಿದ ನ । ಮ್ಮುಡುಪಿಯ ಶ್ರೀಕೃಷ್ಣ ॥ ॥ ಅ.ಪ ॥

ಮಾನವ ಮನವನ್ನು । ಮೊಸರಂತೆ ಮಥಿಸಿದ ।
ಕಾವನ ತೋರುವೆಯಾ । ಹಾಗಲ್ಲದಿದ್ದರೆ ।
ದೇವತೆಗಳಿಗಮೃತವನುಣಿಸಿದೆನೆಂಬ ।
ನೋವನು ಸಾರಿದೆಯೋ । ಸೌಭಾಗ್ಯ ಸಿರಿಯೋ ॥
ಸೇವಕರ ಸೇವಾನುಗುಣಫಲ ।
ಜೀವ ತರತಮ ಭಾವವೊ

ಭವನಾವ ನಡೆಸುವ ನಿಪುಣತೆಯೂ । ದುರಿ ।
ತಾವಳಿಯ ದೂರೋಡಿಸುವೆಯೊ ॥ ॥ 1 ॥

ಕಲಿಯು ಬಲದಿಂದ ಜ್ಞಾನ । ಕಲೆಯುಡಗಲು ದೇವ ।
ರ್ಕಳು ಬಂದು ಸ್ತುತಿಸಲಂದು । ಸಕಲ ಸುರ ।
ತಿಲಕ ವಾಯುವಿನ ಬೂ । ವಲಯದೊಳಗವತಾರ
ಗೊಳಿಸುವರೆ ಹೇಳ್ದೆನೆಂದು । ನೀ ಮನಕೆ ತಂದು ॥
ಹಲವು ಬವದಲಿ ಭಜಿಪ ಸಜ್ಜನ ।
ಕುಲಕೆ ಮೋಕ್ಷಾಂತದ ಚತುರ್ವಿಧ ।
ಫಲವ ನೀಡುವೆನೆಂದು ಪವನನಿ – ।
ಗೊಲಿದು ಬಂದೀ ನಿಲಯದೊಳಗಿಹೆ ॥ ॥ 2 ॥

ಸರ್ವಜ್ಞಮುನಿಕೃತ ಸಕಲ ಪ್ರಬಂಧಗಳನ್ನು ।
ನಿವ್ಯಾ೯ಜ್ಯದಲಿ ಕೊಳ್ಳುತೆ । ನಿರ್ವಾಹಗೊಳುತ ।
ದುರ್ವಾದಿ ಪಟಲಾದ್ರಿ ಗರ್ವಾಪಹಾರ ರತ ।
ಸರ್ವಶಾಸ್ತ್ರವ ಕೇಳುತ । ಸಂತೋಷ ಪಡುತ ॥
ನಿರ್ವ್ಯಳೀಕದಿ ಸೇವಿಸುವ ಗುರು ।
ಶರ್ವಪೂರ್ವ ಸುಪರ್ವರಿಪುಗಳ ।
ಸುರ್ವಿಯೊಳಗಡಿಯಿಡಗೊಡದ ಸುರ
ಸಾರ್ವಭೌಮ ಶುಭೋನ್ನತಿಪ್ರದ ॥ ॥ 3 ॥

ಶ್ರೀನಿಕೇತನ ಸರ್ವಪುರುಷಾರ್ಥದಾಯಿಯೆ ।
ನೀನಿಲ್ಲಿ ನೆಲೆಯಾಗಿದೋರಿ । ಇರುಲಿನ್ನು ಭಜಿಸದೆ ।
ನಾನಾ ದೈವಗಳ ಸೇರಿ । ಹಲ್ಲುಗಳ ತೋರಿ ।
ಏನನುಸುರುವೆ ಕೃಷ್ಣ ಬುದ್ಧಿ ಪಿ – ।
ಹೀನತೆಯ ಅವನೊಂದನೆಣಿಸದೆ ।
ಮಾನಿನೆನ್ನ ಕೃಪಾನಿಧಿಯೆ ಪವ ।
ಮಾನ ವಂದಿತ ಪಾದ ಪಲ್ಲವ ॥ ॥ 4 ॥

ದ್ವಾರಾವತಿಯೊಳು ಸಂ । ಸಾರಿ ಭಾವವನೆಲ್ಲ ।
ತೋರಿದೆ ಕಾರಣದಿ ಅಲ್ಲಿಂದ ಭರದಿ ।
ವಾರಿಧಿಮಾರ್ಗವ ಸ್ವಾರಿಯ (?) ನೆವನದಿ ।
ವಾರಿವ್ರಾಜರ ಸೇರಿದಿ । ತದ್ಭಕ್ತಿಗೊಲಿದಿ ।

ಮೂರಥಯಾಪದಿ ವೆಂಕಟಾದ್ರಿಗೆ । ( * )
ಬಾರದಿಪ ಸಜ್ಜನರ ಮೋಕ್ಷರು
ಜಾರಸಾಮ್ಯತೆ ಸೂಸುತಿಪ್ಪನ ।
ರೋರುಹಸ್ಮಿತ ಮುಖವ ತೊರುವಿ ॥ ॥ 5 ॥

( * ) ಇದು ತುಪಾಕಿ ವೆಂಕಟರಮಣಾಚಾರ್ಯರ ಕೃತಿ ಎಂದು ಹೇಳುತ್ತಾರೆ ಇವರದೆಂದು ಹೇಳಲಾಗುವ ಮತ್ತೊಂದು ಕೀರ್ತನೆಯಲ್ಲಿ ' ಉರಗಗಿರೀಶ ' ಎಂಬ ಅಂಕಿತವಿರುವುದರಿಂದ ಈ ಹರಿದಾಸರ ಅಂಕಿತ ಯಾವುದೆಂದು ನಿಷ್ಕರ್ಷೆಯಾಗಬೇಕಾಗಿದೆ, ಈ ಎರಡೂ ಅಂಕಿತಗಳಲ್ಲಿ ಕೃತಿರಚನೆ ಮಾಡುವ ಅಭ್ಯಾಸ ಅವರಿಗಿತ್ತೇನೋ ?

-60-

ರಾಗ ಶಂಕರಾಭರಣ – ಏಕತಾಳ

ಸನಕಸನಂದನ ನಿಂತು ನೀರದ ।
ವರ್ಣನ – ಗುಣರತ್ನನ ॥
ಮುನಿಜನಪ್ರಿಯ ಮುದ್ದು ಉಡುಪಿನ ।
ರಂಗನ – ದಯಾಪಾಂಗನ ॥ ॥ ಪ ॥

ದೇವಕೀ ಜಠರೋದಯಾಂಬುಧಿ ।
ಚಂದ್ರನ – ಗುಣಸಾಂದ್ರನ ॥
ಗೋವ್ರಜಕೆ ವಸ ಯಮುನೆ ದಾಟಿ ।
ಬಂದನ – ಅಲ್ಲಿ ನಿಂದನ ॥

ಮಾವ ಕಳುಹಿದ ಮಾಯಾ ಶಟಿವಿಯ ।
ಕೊಂದನ – ಚಿದಾನಂದನ ॥
ದೇವರಿಪು – ದೈತ್ಯೇಂದ್ರ ಶಕಟನ ।
ಒದ್ದನ – ಶ್ರುತಿ ಸಿದ್ಧನ ॥ ॥ ೧ ॥

ಗೋಕುಲದ ಗೋಪಿಯರ ವಂಚಕ ।
ಚೋರನ – ಬಹುಧೀರನ ॥

ಅನೇಕ ನಾರಿಯರ್ವಸನವನು ಕ – ।
ದ್ದೊಯ್ದನ – ತುರುಗಾಯ್ದನ ।।

ನಾಕಿಯರಿಗರಿ ಧೇನುಕವತ್ಸ ವಿ – ।
ಘಾತನ – ವಿಖ್ಯಾತನ ।।
ಕಾಕುಮತಿ ಕಾಳಿಂಗನ ಫಣ ।
ತುಳಿದನ – ಆವಗೊಲಿದನ ।। ॥ ೩ ॥

ಶೈಲವನು ಅಹಿಶಾಯಿ ಬೆರಳಲಿ ।
ಆಂತನ – ಬಲವಂತನ ।।
ಸೋಳ ಸಾಸಿರ ಬಾಲೆಯರ ಕರ ।
ಪಿಡಿವನ – ಸುಧೆಗುಡಿದನ ।।

ಬಾಲೆ ಭಾಮೆಯರೊಡನ ಜಲಕ್ರೀಡೆ –
ಗಿಳಿದನ – ಅಲ್ಲಿ ನಲಿದನ ।।
ಲೀಲೆಯಲಿ ಲಲನೆಯರಿಗಿಷ್ಟವ ।
ಕೊಟ್ಟನ - ಸಂತುಷ್ಟನ ।। ॥ ೩ ॥

ಕ್ರೂರ - ಬಕ ಕೇಶಿಗಳನೆಲ್ಲ ।
ಸೀಳ್ದನ - ಸುರರಾಳ್ದನ ।।
ಅಕ್ರೂರ ಕರೆಯಲು ಹರುಷದಿಂದಲಿ ।
ಬಂದನ - ಸುರವಂದ್ಯನ ।।

ನಾರಿ ಕುಬುಜೆಗೆ ಭೂರಿ ಸಂತನ ।
ವಿತ್ತನ - ಅತಿಶಕ್ತನ ।।
ವಾರಣವನು ಕೆಡಹಿದಪ್ರತಿ – ।
ಮಲ್ಲನ - ಅತಿಚೆಲ್ವನ ।। ॥ ೪ ॥

ಸುಲಭದಿಂದಲಿ ಶಿವನ ಧನುವನು ।
ಮುರಿದನ - ನೆರೆಮೆರೆದನ ।।
ಮಲೆತ ಮಲ್ಲರ ಕೆಡಹಿರಂಗದಿ ।
ನಿಂತನ - ಜಯವಂತನ ।।

ಖಳ ಕುಲಾಗ್ರಣಿ ಕಂಸನೆಂಬನ ।

ಹೊಡೆದವನ – ಮಡಿಗೆಡೆದವನ ।।
ಬಳದಿ ತಾಯಿ – ತಂದೆ ಬಂಧನ ।
ಕಡಿದನ - ಯಶವಡೆದನ ।। ॥ 5 ॥

ಭುವನ ಪಟ್ಟವನುಗ್ರಸೇನಗೆ ।
ಕೊಟ್ಟನ - ಅತಿ ಶ್ರೇಷ್ಠನ ।।
ಯುವತಿಯರಿಗುದ್ಧವನ ಕಳುಹಿದ ।
ಜಾಣನ – ಸುಪ್ರವೀಣನ ।।

ವಿವಿಧ ವಿದ್ಯಾ ಕಲೆಗಳಲ್ಲವ ।
ನರಿತನ – ಶುಭಚರಿತನ ।।
ಜವನ ಶಿಕ್ಷಿಸಿ ದ್ವಿಜನ ಕಂದನ ।
ತಂದನ – ಆನಂದನ ॥ ॥ 6 ॥

ಕುಮತಿ ಖಳ ಮಾಗಧನ ಯುದ್ಧದಿ ।
ಗೆದ್ದನ – ಅನವದ್ಯನ ।।
ದ್ಯುಮಣಿಸಮ ದ್ವಾರಕಿಯ ರಚಿಸಿದ – ।
ಧಾರನ – ಗಂಭೀರನ ।।

ಸುಮತಿ ಮುಚುಕುಂದನೊದ್ದೆ ಯವನನ ।
ಸುಟ್ಟನ – ಅತಿದಿಟ್ಟನ ।।
ವಿಮಲ ಸುಚರಿತ್ರಾಷ್ಟ ಮಹಿಷಿಯ – ।
ರಾಳ್ದನ – ನೆರೆ ಬಾಳ್ದನ ।। ॥ 7 ॥

ಮುರ ನರಕ ಮುಖ್ಯರನು ಚಕ್ರದಿ ।
ತರಿದನ – ಕರಿವರದನ ।।
ಸುರತರುವ ಸತಿಗಾಗಿ ತಂದ ಸ – ।
ಮರ್ದನ – ಜಗತ್ಕರ್ತನ ।।

ದುರುಳ ಶಿಶುಪಾಲಾದಿ ದೈತ್ಯ ಸಂ – ।
ಹಾರನ – ಬಹು ಶೂರನ ।।
ಕುರುಕುಲಕೆ ಲಯವಿತ್ತ ಪಾಂಡವ ।
ಪ್ರಿಯನ – ಕವಿಗೇಯನ ।। ॥ 8 ॥

ಇಂತು ಇಳೆಯು ಸುಜನರ ನಲಹುವ ।
ಕಾಂತನ – ಸಿರಿವಂತನ ।।
ಮಂಥವುಳ್ಳ ಪ್ರಸನ್ನ ಹಯುವ – ।
ದನನ – ಮುನಿಮಾನ್ಯನ ।।

ಸಂತತವೀ ಸಾರಕಥೆಯನು ।
ಕೇಳ್ವರ - ಪರಿಬಾಳ್ವರ ।।
ಕಂತುಪಿತ – ಕಾರುಣ್ಯದಿಂದಲಿ ।
ಪೊರೆವನು – ಸುಖಗರವನು ।। ।। 9 ।।

–61–

ರಾಗ ಪೂರ್ವಿ – ಆಟತಾಳ

ನೋಡಬನ್ನಿರೋ ಜನರು । ಶ್ರೀಕೃಷ್ಣನ । ಜೋಡು
ದೀವಟಿಗೆ ಸೇವೆ ॥ ಪ ॥ ನೋಡಿಯೇ ಸಮ್ಮಯ ಮನದ
ಇಷ್ಟಾರ್ಥವ । ಬೇಡಿ ಚರಣ ಪೊಗುವ ಪದಯುಗವ ॥ ಅ ಪ ॥
ಅಂಜಿಕವರಿಹರ ಅಸುರ ಭಂಜನನಾದ । ಕಂಜಾಕ್ಷ ಶ್ರೀಕೃಷ್ಣ
ನಿದಿರೊಳು ।। ನಿಂದು ನಂಜೆಯು ವೇಳ್ಯದಿ ರಾಜಿಪ ರಜತದ ।
ಪಂಜಸೇವೆಯ ಕರಾಂಜಲಿಯನು ಮುಗಿದು ।। 1 ।। ನರದ
ಜನರ ಮುಂದೆ ಗುರುರಾಯ ತಾ ಬಂದು ಕರವ ಮುಗಿದು
ನಿಂದಿರುತಿಪ್ಪ ಸಮಯದಿ ॥ ಪರಿ ಪರಿ ವಿನಿಯೋಗವವರೆಲ್ಲ
ತಾವ್ ತಮ್ಮ । ನರತಿ ತಪ್ಪದೆ ಬಂದು ಇರುತಿಪ್ಪ ನೊಬಗನು ॥ 2 ॥
ಪಂಚಮುಖದ ಜ್ಯೋತಿ ಬೆಳಗಲು ಎಡಬಲ ।
ಸಂಚರಿಸುವ ಮಾಮ್ಮರಿ ಮೃಗಚಾರಿಯ ।। ಕಾಂಚನಮಯ
ದ ಕಟ್ಟಿಗಕೋಲ ಹಸುವಿನ । ಲಾಂಛನವಾದಗೆ ಹಾಕುವ
ವರಿಯ ।। 3 ।। ಬಟ್ಟಲ ದೀಪ್ತ ವಿಶಿಷ್ಟ ಲಾಜಾಕ್ಷತೆ । ಪುಟ್ಟ
ಕದಳಿ ಬೆಲ್ಲ ಕಸ್ತೂರಿಗಳಿಂದ ।। ಕೃಷ್ಣರಾಯನ ಮುಂದಿಟ್ಟು
ಸಮರ್ಪಿಸಿ ಪೂ । ತ್ರಿಟ್ಟ ಆರತಿ ಶ್ರೇಷ್ಟರೆತ್ತುವುದನ್ನು ।। 4 ।।
ದೇವ ದೇವೋತ್ತಮ ದೇವೇಶನೆನುತಲಿ । ಭಾವಶುದ್ಧದಿ
ಬಕ್ತರು ಸ್ತುತಿಗೈಯುತ ।। ಗೋವಳರಾಯನ ಜಯಶೀಲ
ನಾಗೆಂದು । ಗೋವಿಂದ ಎನುತಲಿ ಘೋಷಮಾಳ್ಪುದನು ।। 5 ।।

ಬಯಲಾನಿವಾರಣೆ ಭಕ್ತದುರಿತ ನಿವಾರಣ 1 ಪರಿಕೃಷ್ಣ ಪರ
ದೃವ ಪರಮ ಪುರುಷನೆಂದು 11 ಸ್ಮರಣೆಯಿಂದಲಿ ಮನ
ಪರಸಿ ವಂದಿಸಿ ತೆ 1 ಚ್ಚರಣವ ನೋಡಿಯು ಪಡೆವರೆ ॥ 6 ॥
ಮಧ್ವರಾಯರ ಮತಕ್ಕದ್ವೈತನಾಗಿಯೆ ಸಿದ್ಧವಾಗಿಹ ಫಲ
ಪೆದ್ದು ತೋರದ ತೆರೆ 1 ಉದ್ಧರಿಸುವೆನೆಂಬ ಪುರಂದರ ವಿಠ
ಲನ 1 ಮುದ್ದು ಶ್ರೀಕೃಷ್ಣ ಮೂರುತಿ ಮಹಿಮೆಯ ॥ 7 ॥

-62-

ರಾಗ ಭೈರವಿ – ಏಕತಾಳ

ನೋಡಿದೇ ಉಡುಪಿನ ವಾಸನ ನೋಡಿದೇ ।। ಪಲ್ಲವಿ 11 ನೋಡಿದೆ
ನೂ ಉಡುಪಿನವಾಸನ । ನೋಡಿದೆನೂ ಯಾದವೇಶನ । ನೋಡಿದೆನೊ
ಮಾನವವೇಶನ ನೋಡಿದೆನೂ ಲಕುಮೀಶನ ।।ಅ.ಪ 11 ಪರುಶುರಾಮನು
ಭೂಮಿಸುರರಿಗೆ ನರುಪ ಧಾರುಣಿ ದಾನೆಯ 1 ಏರೆದು ಕೇಸರಿಗಿರಿಯು
ಪಡುವಲ ಶರನಿಧಿಯನು ಶರವಲಿ ।। ಬರವಿ ಬಡಿಸಿದ ಶೂರ್ಪಾಕಾರವ
ತೆರವಿ ನೆಲೆಗೀಧರುಣಿಗೆ ।। 1 ।। ಯಾಗಗೋಸುಗರಾಮ ಭೋಜನು
ನೇಗಲಿಯ ಕೊನೆಯಿಂದಲಿ 1 ಆಗ ಭೂಮಿಯ ಶೋಧಿಸಲು
ಒಂದು ನಾಗ ಬಂದಿತು ವ್ಯತವಾಗಿ । ತೂಗಿಶರವನು ಭೃಗು
ಕುಲೇಶಗೆ ಬಾಗಿನೆನಿಸುಬಲು ಸಂಕೇತ 1 ನಾಗಿ ಭೂಮಿಪಾಲ ರಿಪು
ಜನ್ನಾಗಿ ಒಲಿದುದು ನೋಡಿದೇ 11 2 !! ತಿಳುಪಿದನು ಪೂರ್ವದಲಿ ಈ
ಫಣಿ ಖಳನು ಕಾಣೊ ಇವನಿಂದು 1 ಅಳಿದು ಪೋದುದು ಲೇಸು ಭೂ
ಸುರ ಕುಲಕೆ ಸಂತೋಷವಾಯಿತು 1 ಒಲಿಮೆಯಿಂ ಸತ್ಕಾರ ವಿಧ
ವೆಗ್ಗಳವಾಗಿ ಸುಯಾಗವ 1 ಸುಲಭಮುಸದಲಿ ಮಾಡಿಸಲು ನಿಶ್ಚಲ
ಬಕುತಿಯ ಸ್ತುತಿಸಲು ॥ 3 ॥ ಇಂದಿರಾಪತಿ ಕರುಣೆನೆಂದು ಅಂದಿಗೆ
ರಾಮಭೋಜನು । ಒಂದು ಕ್ರೋಶದ ಅಗಲ ರಜತ ಜಲಪಾನನನ
ಮಾಡಿಸಿ ॥ ತಂದು ದೇವನ ಕುಳ್ಳಿರಿಸಿ ಆನಂದದಲಿ ಪೂಲ್ಯಾಡುತ 1
ಕುಂದದಲ್ ಮುಧವನು ಮುಗಿಸಿ ಗೋವಿಂದನ ಪ್ರೀತಿ ಬಡಿಸಿದಾ ॥ 4 ॥
ಭೂತಳದೊಳು ರಜತಪೀಠಾಖ್ಯ ಖ್ಯಾತಿ ಆಯಿತು ಸರ್ವದಾ 1 ಆ
ತರುವಾಯದಲ್ಲಿ ಭಾರ್ಗವ ಭೂತನಾಥನಂದದಿ ।। ವಾತಬಕ್ಷನ
ನಡುವೆ ನಿಂದನು ಮಾತುಯಿಮ ಪುಶಿಯಿಲ್ಲವು 1 ಪೂತುರೆ ಮೋಹಕವ
ತೋರಿದ ಜಾತ ರಹಿತಗೆ ನಮೋ ನಮೋ ॥ 5 ॥ ಇಂತು ಈ ಪರಿಯಿರಲು
ಗಾಂಗೇಯಕಾಂತೆ ದುಹತಪವನೆ ಮಾಡಿ ॥ ಸಂತತ ಗೋಪಾಲಕೃಷ್ಣನ

ಸಂತೋಷಪಡಿಸಿದಾ ॥ ಚಿಂತೆಯಲಿ ವಿದೂರನಾವನು ಮುಂತಿನಡೆದಾ
ಕಥೆ ಕೇಳಿ । ಕಂತು ಹರನ ಒಲಿಸಿ ಉಡುಪಕಾಂತೆ ಪರವನೈ
ದಿದಾ ॥ 6 ॥ ಮೂರುಯುಗದಲಿ ಈ ಪರಿಯಾಗೆ ಮಾರುತ ಮಧ್ವಗೇ
ಹನ ಚಾರುಮನೆಯಲ್ಲಿ ಜನಿಸಿ ವೈಷ್ಣವಾಚಾರ್ಯ ಈ ದುಶ್ಶಾಸ್ತ್ರವಾ ।
ಹರಿಸಿದ । ಹರುಷದಲಿ ರುಗ್ಮಿಣಿ ದ್ವಾರಕಿಲಿ ಪೂಜೆಮಾಡಿದಾ । ಮೂರುತಿ
ಯ ಸ್ಥಾಪಿಸಿದ ಲೀಲೆಯ ಆರು ಬಣ್ಣಿಪಲಾರರು ॥ 7 ॥ ಇದೆ ರಜತ
ಪೀಠ ಇದೆ ಅಜಕಾನನವಿದೆ ಇವ ಉಡುಪಿ ಇದೆ ಸಿವಕುಲ್ಯ ॥ ಅದರ
ಬಳಿಯಲಿ ಇಪ್ಪ ತೀರ್ಥದ ಅದುಭುತವ ವರ್ಣಿಸುವೆನು । ಇದೆ ಅನಂತ
ಸರೋವರವು ಮತ್ತೆ ವಾರುಣ್ಯ ಚಂದ್ರಮತೀರ್ಥ ॥ ಇದಕೇ ಮಧ್ವ
ಸರೋವರವೆಂಬುದು ಕಾಣಿರೋ ಶ್ರುತಿ ಉಕ್ತಿಲಿ ॥ 8 ॥ ಸಕಲದೇಶದ
ಜನರು ತ್ರಿವಿಧ ಸುಖವಾರಿಧಿಯೊಳು ಸೂಸುತ । ಅಖಿಳವೈಭವ
ದಿಂದ ಬಪ್ಪ ಅಕಟ ಸುಪರಿಗೆ ಸಂಬೆ ॥ ಮಕರ ರಾಶಿಗೆ ಸೂ –
ರ್ಯ ಬಂದ ಕಾಲಕ್ಕೆ ಕೃಷ್ಣನ ನೋಡುವೆನೆಂದು । ತಕ್ಕನೆ ನಿಲ್ಲದೆ
ಬಂದು ನೆರೆದರು ಮುಕುತಾರ್ಥ ಹರಿಪ್ರೇರಕಾ ॥ 9 ॥ ಸಜ್ಜ –
ನರ ಸಿರಿಚರಣದಲಿ ಮಜ್ಜನವಂಗೈವುತ । ಹೆಜ್ಜೆ
ಹೆಜ್ಜೆಗೆ ಕೃಷ್ಣ ಕೃಷ್ಣಾ ಅಬ್ಜನಾಥ ನಾರಾಯಣ ॥ ಮೂಜ್ಜಗತ್ಪತಿ
ಯೆಂದು ಸ್ತೋತ್ರ ಪಠಿಸುತ । ರುಜ್ಜುವಾಣಿಯ ಬಹಿರದಿಂದ
ನಿವ್ಯಾಜ್ಯ ಭಕುತಿಲಿ ನೋಡಿದೇ ॥ 10 ॥ ಮೊದಲು ನಮಿಸಿದೆ
ಚಂದ್ರಶೇಖರ ಪದುಮಗರ್ಭನ ಮಗನೆಂದು । ಅದರ ತೆರು
ವಾಯದಲ್ಲಿ ಮಾಯಿಯ ಇದೆಬಡಿದ ಪೂರ್ಣಬೋಧರು ಸದ
ಮಲ ಕುಳಿತಿದ್ದ ಸ್ಥಾನವ ಒಪಗಿ ನೋಡಿಕೊಂಡಾ
ಡುವೆ । ಮದನ ಜನಕಾನಂತಸ್ವಾಮಿಯ ಪದಯುಗಳವನು ನೋ
ಡಿದೇ ॥ 11 ॥ ರತುನಗರ್ಭದೊಳಧಿಕವಾದ ತೀರ್ಥವಿದು ಮಧ್ವಾಖ್ಯ
ವೀ ಸತತ ಬಿಡದಲೆಯಲ್ಲಿ ಬಾಗೀರಥಿ ವಾಸ ಸದಿಗಳವಡಗೂಡಿ
ನುತಿಸಿಮೆಲ್ಲನ ಮುಟ್ಟಿ ಮಿಂದು ಮತ್ತೆ ಕರ್ಮದ ಚರಿಯಮಾ
ಹಿತ ಮನಸಿನಲಿ ಮಾಡುವೆಂದ ಕೃತಕಾರ್ಯರನು ನೋಡಿದೇ ॥ 12 ॥
ಅಲ್ಲಿಂದ ನವರಂಧ್ರಗಳ ಕಂಡು ಫುಲ್ಲಲೋಚನ
ಕೃಷ್ಣನ । ಸೊಲ್ಲಿನಿಂದಲಿ ಪಾಡಿ ಭಾರತಿ ವಲ್ಲಭನ ಕೊಂಡಾ
ಡುತ ॥ ಮೆಲ್ಲ ಮೆಲ್ಲನೆ ದ್ವಾರವನೆ ಪೊಕ್ಕು ನಿಲ್ಲದಲಿ ಸಮೀ–
ಪಕ್ಕ ಬಲ್ಲಿದಸುಗುಣಸುತ್ತ ಭಕ್ತವತ್ಸಲನಂಘ್ರಿಯ ನೋ
ಡಿದೇ ॥ 13 ॥ ಮೂರು ಬಗೆ ಭೂಷಣವ ಧರಿಸಿದ ಮೂರುತಿ
ಯಿದೆ ಕಾಣಿರೋ । ಪಾರುಗಾಣರು ಈತನ ಅವತಾರ ಗುಣಕ್ರಿಯ
ಮಹಿಮೆಯ ॥ ವಾರಿಜೋದ್ಭವ ಶಿವ ಮುಖ್ಯಾದ್ಯರು ನಾರಿ

ಹಾ ಹಾ ಎಂಬರು । ಧಾರುಣಿಗ ಇಳಿದ ವೃಂದ ನವನೀತ ಚೋರನ
ಕೊಂಡಾಡಿದೇ ॥ 14 ॥ ತ್ರಾಹಿ ತ್ರಯಯಜಾವಸ್ಥ ಪ್ರೇರಕತ್ರಾಹಿ
ತ್ರಯ ರೂಪಾತ್ಮಕ । ತ್ರಾಹಿತ್ರಯುದಾಮವಾನ ಸರ್ವೇಶ
ತ್ರಾಹಿ ತ್ರಯ ರೂಪಾತ್ಮಕ ॥ ತ್ರಾಹಿ ತ್ರಯಪಸುಗವ್ವ ಪ್ರಸಿದ್ಧ
ತ್ರಾಹಿ ತ್ರಯವನು ಕೊಡುವನೆ । ತ್ರಾಹಿ ತ್ರಯಗಣ್ಣಾವನ ಪಾಲಕ
ತ್ರಾಹಿ ತ್ರಾಹಿ ತ್ರಯ ಲೋಕಾದಿದಾ ॥ 15 ॥ ಪಾಹಿವರದಮಾನಂದ
ಗೋವಿಂದ ಪಾಹಿ ಪಾಲಾಂಬುದಿಶಾಯಿ ॥ ಪಾಹಿ ಜಗತತ್ಕಂತೆ
ಭಿನ್ನಪಾಹಿ ನಿರ್ಭಿನ್ನ ಸ್ವರೂಪ । ಪಾಹಿ ಸುಖಿ ಶಿಖಿ ಜ್ಞಾನಪೂ-
ರ್ಣನ ಪಾಹಿಯೆನ್ನಯ ಪ್ರೇಮವೇ ॥ 16 ॥ ನಮೋ ನಮೋ
ಚತುರಾತ್ಮ ಗುಣನಿದಿ ಪುನ್ನಾಮಕಾ । ನಮೋ ನಮೋ ಪಟಪತ್ರ
ಶಾಯಿ ನಮೋ ನಮೋ ಪುಣ್ಯ ಶ್ಲೋಕನ । ನಮೋ ನಮೋ
ನಾಮನ ಸರ್ವಗ ನಮೋ ನಮೋ ಸರ್ವಶಬ್ದನ ॥ ನಮೋ
ನಮೋ ಅವ್ಯಕ್ತ ವ್ಯಕ್ತಾ ನಮೊ ನಮೋ ನಾರಾಯಣಾ ॥ 17 ॥
ಜಯ ಜಯತು ಕರಿವರದ ವಾಮನ ಜಯ ಜಯತು ನಾ ।
ರದ ವಂದ್ಯನ ॥ ಜಯ ಜಯತು ಪ್ರಹ್ಲಾದ ರಕ್ಷಕ ಜಯತು
ವಾರ್ದನ ನಾರದಿ । ಜಯ ಜಯತು ಅಂಬರೀಷ ಪರಿಪಾಲ ಜಯತು
ಪಾರಾಶರನುತ । ಜಯ ಜಯತು ಪಾಂಚಾಲಿ ಮಾನಕಾಯುವನೆ
ಜಯತು ಗೊಪಿಕಾವಲ್ಲಭಾ ॥ 18 ॥ ಇನಿತು ಬಗೆಯಲಿ ತುತಿಸಿ
ದೇವನ ಮನವಣಿಯೆ ಕೊಂಡಾಡುತ । ಕ್ಷಣ ಬಿಡದ ತನ್ನನ -
ನೆಸಿದವರಿಗೆ ಹೊಣೆಯಾಗಿ ಪಾಲಿಸುವನು ॥ ಜನುಮ ಜನುಮದಿಂ
ದ ಮಾಡಿದ ಘನದುರಿತ ಪರ್ವತಗಳು । ಚಿಗಿಡಿದು ನಾದ-
ನವೆಲ್ಲ ವೇಗ ತನಗೆ ತಾನೆ ಮಾಡಿಸುವನೋ ॥ 19 ॥ ಆದಿ
ನಾರಾಯಣ ಗೋವಿಂದ ಪ್ರಾರ್ಥ ಭೂಸುರ ವೇಶವು । ಜೀವ
ಮಾಡಿದ ನಾರಾಯಣೇ । ಸುಪ್ರಸಾದ ತಿರ್ಮಲ ರೂಪವು ॥
ಆದಿವಾರವು ವಿಡಿದು ಯರಡು ಐದು ದಿನ ಪರಿಯಂತರವು ।
ಶ್ರೀ ಧರೇಶನು ವೇಷ ಧರಿಸಿದ್ದು ಸಾಧು ಸಂಗಡ ನೋಡಿದೆ ॥ 20 ॥
ಉದಯಕಾಲದ ಪೂಜಯಾಗಲು ಮುದದಿ ನಿರ್ಮಾಲ್ಯ
ವಿಸರ್ಜನೆ । ಇವೆ ಪೂರೈಸಲು ಮತ್ತೆ ಪಂಚನುದ ಪೂಜೆ ಪ್ರದ್ವಾ-
ರ್ಚನೆ ॥ ಒದಗಿ ಆಗಲು ಮೇಲೆ ಸುಧವಿಧುವಂತ ಶರ್ಕರಾ
ನದತೀರ್ಥ ಅಲಂಕಾರ ಅವಸರ ಇದೆ ಮಹಾಪೂಜೆ ನೋಡಿದೇ ॥ 21 ॥
ಗಂಧ ಪರಿಮಳ ತುಳಸಿ ಪುಷ್ಪಾನಂದ ಬೂಷಣ ದರಿಸಿಪ್ಪ ।
ಒಂದು ಕೈಯಲಿ ದಾಮ ಕಡೆಗೋಲಂದದಿಂದಲಿ ತಾ ತಾಳಿದಾ ॥
ಮಂದರಿಗೆ ಇದು ಸಾಧ್ಯವಲ್ಲವು ಮುಂದೆ ಯತಿಗಳು ಮಂತ್ರವ ।

ಮುಂದನಗೆಯುಲಿ ವೇಳುತಿಪ್ಪ ಚಂಪವನು ನಾ ನೋಡಿದೇ ॥ 22 ॥
ಎತ್ತುವ ಧೂಪಾರತಿಗಳು ಹತ್ತೆಂಟು ಬಗೆ ಮಂಗಳಾ । ರುತ್ತಿ
ನಾನಾ ನೈವೇದ್ಯ ಷಡುರಸ ವೊತ್ತಂಗಳು ಪರಿವಿಧ ॥ ಉತ್ತಮ
ಶಾಖಾದಿ ಘೃತ ದಧಿ ತತ್ತಕ್ರ ಫಲವಕ್ವವು । ನುತ್ತಲು ತಂದಿಟ್ಟು
ಅರ್ಪಿಸುತ್ತಲಿಪ್ಪದು ನೋಡಿದೇ ॥ 23 ॥ ಮಂತ್ರ ಘೋಷಣ
ಭಾಗವತ ಜನ ನಿಂತು ಗಾಯನ ಪಾಡಲು । ಅಂತವಿಲ್ಲದೆ ವಾದ್ಯ
ನಂದಣಿ ಚಿಂತಿಸುವ ನಿಜದಾಸರು ॥ ಪಂತೆಪಾಶೆಯಿಲ್ಲದ ಜನ ಸಂ-
ತೋಷದಲಿ ನಲಿವುತ । ತಂತ್ರ ಸಾರೋಕ್ತದ ಪೂಜೆ ಆದ್ಯಂತವನು
ನಾ ನೋಡಿದೇ ॥ 24 ॥ ತೀರ್ಥಪ್ರಸಾದ ಗಂಧ ಅಕ್ಷತೆ ಆರ್ಥಿಯಲಿ
ಕೊಡುವರು । ವ್ಯರ್ಥವಲ್ಲವು ಇಲ್ಲಿ ಒಂದು ಮುಹೂರ್ತವಾದರು
ಯೆಂದಿಗು ॥ ಪಾರ್ಥಸಾರಥಿ ಉಂಡ ಶುಭ ಪದಾರ್ಥ ಬಡಿಸಲು ಉಂಡು
ಕೃ । ತಾರ್ಥನಾದೆನು ಜ್ಞಾನಪಧಿಕ ಸಾರ್ಥಕರನ ನೋಡಿದೇ ॥ 25 ॥ ತರಣಿ
ಮಕರಕೆ ಬರಲು ಗೋಪಾಲ ಮರದ ವೈಜಪದೇನಂಬೆ । ಉರಗ
ಮಂಟಪ ಗಜತುರಗ ಹರಿ ಗರುಡ ಶ್ರೀ ಹನುಮಂತನಾ ॥ ವರ-
ರೂಢನಾಗಿ ಮೆರದು ಆಮೇಲೆ ಮೆರುಗುವ ರಥವನೆ ಏರಿ । ಪರಮ-
ವೇಗದಿ ಚತುರವೀಧಿಯು ತಿರುಗಿ ಬಪ್ಪುದು ನೋಡಿದೇ । 26 ॥
ಓಕುಳಿಯು ಸಂಭ್ರಮವ ಪೇಳಲು ಗೋಕುಲಕೆ ಸಮವೆನಿಸಿತ್ತು ।
ನಾಕೇಶ ಸುರಮುನಿಗಳೊಡನ ಲೋಕಕಾಶ್ಚರಿಯು ತೋರುತ
ನೋಕಿ ನೋಕದ ಹಾಗೆ ಓಕುಳಿ ಹಾಕಿ ಆಡುವ ಲೀಲೆಯು । ಈ ಕಲಿ
ಯುಗದಲಿ ನೋಜಿಗ ಈ ಕಥೆಯಾದುದು ನೋಡಿದೇ ॥ 27 ॥ ಸಂಜೆ
ವಾಲಗ ಎಡ ಬಲದಲಿ ಪಂಜುಕಟ್ಟಿಗೆಕಾರರು । ರಂಜಿಸುವ ಪಲ್ಲಕ್ಕಿ
ಸೇವಿಪ ರಂಜಳವಾಗಿ ಒಪ್ಪಲು ॥ ಕುಂಜರಾರಿಯ ಪೀಠದ ಮೇಲೆ
ಕಂಜಲೋಚನ ಕುಳ್ಳಿರೆ ಸಿ । ರಂಜನದಲಿ ಪೂಜಿಸುವ ಮತಿಪುಂ
ಜ ಯತಿಗಳ ನೋಡಿದೆ ॥ 28 ॥ ಶ್ರುತಿ ಪುರಾಣಗಳು ಪನಿಪತ್ತ್ವ
ವು ಸುತಶಾಸ್ತ್ರ ಪ್ರಬಂಧವು । ಸತತ ಪೇಳುವ ಭಾಗವತ ಸುಸಂಗ
ತಿಯಲಿ ರಾಗ ಭೇದವು ॥ ಶ್ರುತಿಕಥಾಭಾಗ ಪದ್ಯಅಷ್ಟಕ ಮಿತಿ
ಯಿಲ್ಲದಲಿಪ್ಪ ಪ್ರಸಂಗ । ತತುವ ಮಾರ್ಗದಿ ನುಡಿವ ಬಲು-
ಉನ್ನತ ಮಹಿಮರ ನೋಡಿದೇ ॥ 29 ॥ ದಾಸರಕೂಡಿ ಪ್ರಾಳಿ -
ಯ ಸುತ್ತಿ ವಾಸುದೇವನ ದ್ವಾರದ । ಆ ಸರಿತದಲಿ ನಿಂತು ಮಹ
ಪ್ರಕಾಶವಂತೆನು ಒಳಪೋಗೆ । ಲೇಸಾಗಿ ನಮಸ್ಕರಿಸುವಂಥ ಭೂಸುರ
ರ ಸಮುದಾಯಕೇ । ಸೂಸಿ ಮಂತ್ರಾಕ್ಷತೆಯು ಪುಷ್ಪ ಯತೀಶ
ಕೊಡುವುದ ನೋಡಿದೇ ॥ 30 ॥ ಧಾತ್ರಿಯೊಳಗಿದಕೆಲ್ಲಿ ಸಮ
ನಾದ ಕ್ಷೇತ್ರವನು ಸಾಕಾಣೆನು । ಸ್ತೋತ್ರ ಪರಿಸುತ ಬಂದು

ಕಂಡಾ ಮಾತ್ರವಲಿ ಕೈವಲ್ಯವ ॥ ಚಿತ್ರ ಚರಿತ್ರ ಮಹಿಮ
ನೀಲಗಾತ್ರ ವಿಜಯವಿಠಲ ಸೂತ್ರಸಾಧಕ ವಾಯುಬಲಿಯೆ ಈ ಯಾತ್ರೆ
ಫಲವನು ಕೊಡುವನು ॥ 31 ॥

## -63-

ರಾಗ . ಭೈರವಿ – ತ್ರಿವಿಡತಾಳ

ನೋಡಿದೆನು ಯಾದವ ಕೃಷ್ಣನ
ಮಾಡಿದೆನು ಮನವಣಿಯ ವರಗಳ
ಬೇಡಿದಾಕ್ಷಣ ಕೊಡುವ ಜಗತ್ರಯ
ಪಾಡಿಸುವ ವಾಗೀಶ ಜನಕನ ॥ ॥ ಪ ॥

ವೇದ ಭೂಧರ ಮೇದಿನಿ ಪ್ರಲ್ಹಾದ ನಾರದನ ಕಾದವಂಶವ
ಭೇದಸಾಗರ ಹಾದಿಬಿಗಿದ ಗೋಕಾಯುವ ಒತ್ತಲೆಯಾದ ತುರಗವ
ಬೀದಿವರಿಸಿದನಿತ ಹಯಮೊಗ ಬಾದರಾಯಣನತ್ತ ವೈಕುಂಠ
ಬೋದ ಮೂರುತಿ ಕಪಿಲದಾಸಾವಿನೋದ ರೂಪದ ಆದಿದೈವವ ॥ 1 ॥

ಜನನಿಗಾಟವ ತೋರಿ ಕಡಗೋಲು ನೇಣನು ಕರದಿಪಿಡಿದು ರು
ಗ್ಮಿಣಿಯು ಕೈಯಿಂದ ಪೂಜೆಗೊಂಡ ಚ್ಯುತನೆ ಬಂದು ಗೋಪಿ ಚಂ
ದನದೊಳಡಗಿ ಅಲ್ಲಿಂದ ಆನಂದ ಮುನಿಗೊಲಿದು ಬಲುವೇಗ ಪಡು
ವಣ ವನಧಿ ಕ್ಷೀರದಲಿಪ್ಪನಂತಾಸನ ಒಳಿಯು ನಿಂದಿದ್ದ ಚೆಲುವ ॥ 2 ॥

ಸುತ್ತ ಯೋಜನೆ ಕ್ಷೇತ್ರವಿದರೊಳು ಉತ್ತಮ ವಿಮಾನವೇದ ಪ
ರ್ವತೆಗಳಲ್ಲಲ್ಲಿ ಸರೋವರ ಕತ್ತಲಿಗಭಿಮಾನಿನಿ ದುರ್ಗಾ
ಚಿತ್ತೈಸೊಪ್ಪುವ ಸ್ವರ್ಣ ನದಿಯು ಮಾರುತ ಸೋಕಲು ದುರಿತಪರಿಹರ
ನೋತ್ತಮರಿಗಿದು ಸಿದ್ಧ ಸರ್ವದ ತತ್ತ್ವಳಿವ ಪರತತ್ವ ಹರಿಯ ॥ 3 ॥

ತಂತ್ರಸಾರೋಕ್ತ ಪೂಜೆ ನಿರಂತರದಿ ಕೈಕೊಂಬ ಬಲು ಗುಣ
ವಂತನೀತನ ಪೊಳವು ಪೊಗಳಿದರಂತಗಾಣವು ಶ್ರುತಿಪುರಾಣಗ
ಳೆಂತು ಪೇಳಲಿ ಮೆರೆವ ವೈಭವ ಸಂತರಿಗೆ ಅತಿಪ್ರಿಯನಾಗಿಪ್ಪ
ನಂತಕಾಲಕ ದೋಷದೂರ ನಿಶ್ಚಿಂತ ನಿತ್ಯ ಸ್ವಾತಂತ್ರ ಪುರುಷನ ॥ 4 ॥

ಮಕರ ತಿಂಗಳ ಪಕ್ಷದ ಲಕುಮಿರಮಣನ ದಿವಸಲ್ಲೀಗ

ಭೂಕುತಿಯಿಂದಲಿ ಬಂದು ವಂದಿಸಿ ಅಕುಟಿಲರ ಒಡಗೂಡಿನಿಂದು ಗೋ
ಳಕವ ಚಿಂತಿಸಿ ಸ್ನಾನ ಒಂದೆ ಸುಖತೀರ್ಥ ಸರೋವರದಲಿ ಮಾಡೆ
ಸಕಲ ಮನೋಭೀಷ್ಟ ತಾನು ಪಾಲಿಸಿ ಮುಕುತರೊಳು ಪೊಂದಿಸುವಾತನ ॥ 5 ॥

ಶುಕ್ರವಾರದ ಪೂಜೆ ನೋಡಲು ವಕ್ರಗತಿಗಳು ಮುಟ್ಟಲಂಜವು
ಚಕ್ರವರ್ತಿ ತಾನಾಗಿ ಸಕಲ ಪರಾಕ್ರಮದಲಿ ಚರಿಸಿ ಜಗದೊಳು
ಶಕ್ತದೇವಸ್ಥಾನದಲಿ ಕಾಲಕ್ರಮಣ ಮಾಡೆ ಗೋತ್ರದೊಡನೆ ಪೂ
ರ್ಣ ಕ್ರೀಡೆ ಯಾಡಿಸುವ ಸಲಹುವ ಚಕ್ರಧರ ಅಕ್ರೂರ ವರದನ ॥ 6 ॥

ಕಣಿಸಿ ಉಡಿಸುವ ಕುಣಿಸಿ ನೋಡುವ ಕನಸಿನೊಳಗಾವಾಗ ತನ್ನನು
ಮನಸಿನಲಿ ಕ್ಷಣಬಿಡದ ಗುಣಗಳ ಎಣಿಸಿ ವ್ಯೆಮರೆದಡಿಗಡಿಗೆ ಈ
ತನುವೆ ನಿನ್ನಾಧೀನವೆಂದಾ ಜನರಿಗಪವಾದ ಬರಲೀಸನು
ಫಣಫಣಾದಲಿ ನಾಟ್ಯವಾಡಿದ ದನುಜದಲ್ಲಣ ವಿಜಯವಿಠ್ಠಲನ್ನ ॥ 7 ॥

–64–

ರಾಗ ಶಂಕರಾಭರಣ – ಆಟ್ಟ ತಾಳ

ನೋಡಿದೇ । ಶ್ರೀಕೃಷ್ಣನ । ನೋಡಿದೆ ॥ ಪ ॥

ನೋಡಿದೆ ಒಂಬತ್ತುಗೂಡಿನ ಕಿಟಕಿಯೊ –
ಳ್ಳೊಡಿದ ಮಂದಿಯೊಳ್ಗಾಡಿಕಾರನನಿಂದು ॥ ॥ ಅ ಪ ॥

ನಾರಿ ಪುರುಷರೊಂದುಗೂಡಿ ಮುಂದೆ
ದಾರಿಯು ಬಿಡದೆ ಹೋರ್ಯಾಡಿ ದೇಹ
ಯಾರದಂತೆ ಪುಡಿ ಪುಡಿ ಮತ್ತೆ
ಶ್ರೀರಮಣನ ಪಾಡಿ । ಬೇಡಿ । ಆಹಾ । ನುತ್ತ
ಸೇರಿದ ಜನರಿವರ ಮಧ್ಯದಿ
ಚಾರು ಮೌಕ್ತಿಕದ ಮಣಿಹಾರ ಶೃಂಗಾರನ್ನ ॥ ॥ 1 ॥

ಅಂಗದೊಳಿಪ ದಿವ್ಯಾಭರಣ । ಕನ –
ಕಂಗಳೊಪ್ಪಿದ ರವಿಕಿರಣ ಮುನಿ –
ಪುಂಗವ ವಂದಿಪ ಚರಣ ಕಮ –
ಲಂಗಳ ನೆನೆವರ ಕರುಣ । ಆಹಾ ।

ಹಿಂಗದೆ ಪೊರೆವ ಶ್ರೀರಂಗ-ಾತ್ನಪಕಂದು
ಮಂಗಳಾರತಿಯಾಗಿ ಸಂಗಡ ಪೊರಡಲು ॥ ॥ 2 ॥

ಬರದಿಂದ ಪಲ್ಲಕ್ಕಿನೇರಿ ಪುದ್ವ –
ನರೋವರದೆಡೆಯುನು ಸಾರಿ । ನುತ್ತ
ಮೆರೆವ ದೀವದಿಂದಲಿ ಸೋಳ್ವಜ –
ನರಿಗೆ ಜಲಕ್ರೀಡೆ ತೋರಿ ಆಹಾ ।
ಸಿರಿಅರಸನು ಹಯುವದನ ಉಡುಪಿಯೊಳ್
ಏರಿ ಮೆರೆವ ಪರ್ಯಾಯ ವಿನೋದವ ॥ ॥ 3 ॥

–65–

ರಾಗ ಕಾಂಬೋದಿ – ಝಂಪೆತಾಳ

ನೋಡಿದೆನೊ ಮನವಣಿಯ ಸಳಿನಬಪಾದ್ಮರ
ಕ್ರೀಡಾಮೃಗವನ ಮಾಡಿ ಆಡೀಂವ ವಿಚಿತ್ರ ಮಹಿಮ ಗೋದಾಲಗೆ
ಈಡುಗಾಣೆನೊ ಎಲ್ಲೆಲ್ಲಿ ಆವಲ್ಲಿ ॥ ॥ ಪ ॥

ಕಾಲಲಂದಿಗೆ ಗೆಜ್ಜೆ ಸರಪಣಿ ಉಡುದಾರ ಮೇಲು ಕಿರಿಗೆಜ್ಜ ಪಂಟೆ
ತೋಳು ರಕ್ಷಾಮಣಿ ನಾಗಮುರಿಗೆ ಬಂದಿ ನಾಲು ತಾಯಿತ ಕಟ್ಟಿರೆ
ನೀಲ ಮಾಣಿಕ ವಜ್ರದುಂಗುರದ ಬೆರಳು ನುಪಾಲದಲಿ ಇಟ್ಟು ತಿಲಕಾ
ಲಾಲಿಸುವ ಬಾಲಕ ರೂಪದಿಂದಲಿ ಪ್ರಾತಃಕಾಲದಿ
ಮೆರೆವ ಕೃಷ್ಣನ ಇಂದು ॥ ॥ 1 ॥

ಮುಂಗೈ ಮುರಾರಿ ಪವಳಿದ ಬುಲಿಗೆಜ್ಜೆ
ಬಂಗಾರ ಕೊರಳಲ್ಲಿ ಹಾರಂಗಳನ್ನು
ಶೋಭಿನುವ ಪೂಗಾಯಿ ಕರ್ಣದಲಿ
ಮಂಗಳ ಉರ ಕೌಸ್ತುಬ ಕಂಗೊಳಿಪ ಎಳನೂಲು ಹುಲಿಯುಗುರು ತಾಳಿಸರ
ಹಿಂಗದಲೆ ಪಚ್ಚೆಪದಕಾ ಶೃಂಗಾರದರಳೆಲಿ ಶಿರದಿ ಜಾವಳ ಜಡೆ
ತುಂಗಭೂಷಣ ಶಾಂತನ ಇಂದು ॥ ॥ 2 ॥

ಕಣ್ಣಿಗ್ಗಚ್ಚಿದ ಕಪ್ಪು ಮುಕರ ಕಡಗೋಲು ನೇಣನ್ನೆ ಕಂಡಲಿ ಪಿಡಿದು
ಕನ್ನವದನ ಕಂಠ ಉದರ ಉರವಾಣಗಳು ಬೆಣ್ಣೆ ಮೊಸರಲ ತೇದಿರೆ

ಚಿನ್ನನಾಸಾ ಮಣಿತೂಗೆ ಆದರ ಭಾಗ್ಯ ಬಣ್ಣಿಪಲಂದು ತಿಳಿದು
ಚಿನ್ಮಯ ವಿಜಯವಿಠ್ಠಲ ವಿಶ್ವರೂಪಾ ಪಾವನ್ನ ಉಡುಪಿಯ
ಕೃಷ್ಣನ ಇಂದು ॥ ॥ 3 ॥

## –66–

ರಾಗ : ಶಂಕರಾಭರಣ – ಅಟ್ಟತಾಳ

ನೋಡಿದ್ಯಾ ರಂಗನ ನೋಡಿದ್ಯಾ
ನೋಡಿದ್ಯಾ ಶ್ರೀರೂಪನ ನೋಡಿದ್ಯಾ
ನೋಡಿದ್ಯಾ ಮನ ನೀನಿಂದು । ಕೊಂಡಾಡಿದ್ಯಾ ಎದುರಿಲಿ ನಿಂದು ಮಾ
ತಾಡು ವರವನ್ನೆ ಬೇಡು ನಿನ್ನೊಳಗೆ । ಕೂಡಿ ನಲಿನಲಿದಾಡಿ ಶ್ರೀರೂಪನ ॥ಪ॥

ಸರಸ ನೂಪುರ ಗೆಜ್ಜೆ ಪೆಂಡೆ ಪೊನ್ನು ಸರಪಳಿ ಪಾಗಡ ಕಂಡೆ ಹಿಂದೆ
ಧರಣಿ ಮುಟ್ಟಿದ ಜಡೆಗೊಂಡೆ ಇದು ತರುಣಿ ಎನ್ನದಿರಿಗಂಡೆ ಆಹಾ
ಪರಡು ಹಿಮ್ಮಡ ನಾಲ್ಬೆರಳ್ಬೆದರ ಮೇಲೆ ಸುರುಚಿರ ರೇಖೆ
ಚಂದಿರನ ಸೋಲಿಪನು ॥ ॥ 1 ॥

ಚರಣತಳದಲ್ಲಿ ಕೆಂಪು ಸುಧ ಅರವಿಂದ ಧ್ವಜವಜ್ರ ಸೊಂಪು ಬಲು
ಅರಿಸಿ ಕಾಣಿವು ವೇದಗುಂಪು ತುತುಪರಿಗೆ ಸುರರಂಘ್ರಿ ತಂಪು ನೆರಳಾಗಿ ಆಹಾ
ಬೆರಳೊಳಗಿಪ್ಪ ಸುಂದರ ಪಿಲ್ಲಿ ಮೆಂಟಿಕೆ ಕಿರಿಪಿಲ್ಲಿ ಅಂಟುಮೆಂಟು
ಮೆರವ ಕಾಲುಂಗರ ॥ ॥ 2 ॥

ಝುಣ ಝುಣ ಹೆಜ್ಜೆಯನಾದವನ್ನು ಎಣಿಸಲಾರೆನೋ ನೋಡಿವೇದಾನಂತ
ಗುಣದಲ್ಲಿ ಚರಿಸ ಮೋದಾ ಇದೆ ಅಣುರೇಣು ತೃಣಕಾಷ್ಟ ಭೇದಾ ಆಹಾ
ಪ್ರಣತಾರ್ತಿ ಹರವಾದ ಮಿನುಗುವ ಜಾನು ದರ್ಪಣ ನಾಚಿಸೆ ಝುಂಪೆ
ಎಣೆಗಾಣಿ ಶ್ರೀರೂಪಾ ॥ ॥ 3 ॥

ಊರುದ್ವಯಂಗಳು ರಂಭಾ ಸ್ತಂಭಾ ಚಾರುಪೂಕ್ತಳು ಸುಳಿಗುಂಭಾ ತಂತ್ರ
ಸಾರೋಕ್ತದಿ ಪೂಜೆಗೊಂಬ ವಿಸ್ತಾರ ಮಹಿಮ ಸರ್ವಬಿಂಬಾ ಆಹಾ
ಮಾರಲಾವಣ್ಯಕಸಾರ ಮೀರಿದ ಕಾಂತಿ ಆರಾರ ಮನಸಿಗೆ ತೋರಿ
ತೋರದ ವೆಣ್ಣನ ॥ ॥ 4 ॥

ಉದಯರಾಗದ ದಿವ್ಯವಸನಾ ಮೇಲು ಉದರ ತ್ರಿವಳಿ ಬಂದಿ ಹಂಸನಾದಿಂದ

ಮುದದಲ್ಲಿ ಒಡ್ಯಾಣ ಬೆಸನಾ ಕೇಳು ಬುದುಕುಲ ಜಾತ ಪಾಸಿನಸ ಆಹಾ
ಮದಕವೇನೆಂಬೆನೊ ಮದನಾರಿಯು ಸ್ತುತಿಸಿದ ಮರುಳು ಮಾಡಿ
ಮಾಡಿದದುಬುತಾಶ್ಚರ್ಯವಾ ।। ।। 5 ।।

ರನ್ನಪವಳಹಾರ ಪಳಕು ಜೋಡುಕನ್ನಡಿ ಹಾಕಿದ ಮಲಕು ಲೋಕ
ಚೆನ್ನಾಗಿ ತುಂಬಿದ ಬೆಳಕು ನೋಡೆ ಅನಂತ ಸೂರ್ಯರು ಅಳುಕು ಆಹಾ
ಬಣ್ಣ ನ್ಯಾವಳ ಹೇಮ ಸಣ್ಣ ಮುತ್ತಿನ ಮೋಹನ್ನ ಚಿನ್ನದ ಸರಗಳಾ ।।6।।

ನರಿಗೆ ಮುತ್ತಿನ ಚಿಂತಾಕು ಕುಚ ಎರಡರ ಮೇಲೆ ಕಂಚೊಕಾತೊಟ್ಟ
ಭರದಿ ತೂಗುವ ಪಜ್ಜವದಕಾಕೆಳಗೆಹರಿನಡುನಡುಕಿಂಕಿಣಿಕನಕಾ ಆಹಾ
ಹರಳು ಕೆತ್ತಿದ ಚಿತ್ರ ಮಾಟ ಕಟಿಸೂತ್ರ ಶೋಭಿಸೆ ಶಿರನಿರಗಿಯು
ವೈಭವ ।। ।। 7 ।।

ದೋರೆ ಹರಡಿ ಕೈಕಟ್ಟು ಚೂಡಾ ಕಾರ್ಪ್ರಮುಂಗರ ಉಳ್ಳ ಬೊಟ್ಟು ಭಂ
ಗಾರ ಕಂಕಣ ಬಳೆಯಿಟ್ಟು ಶೃಂಗಾರ ಘಣೆಯು ಹಚ್ಚಿ ಬಟ್ಟು ಆಹಾ
ಗೀರು ಗಂಧವು ಗಂಭ್ಯರ ಕರ್ಪೂರ ಕಸ್ತೂರಿ ಲೇಪನ್ನ ಕಂಧರ
ತ್ರಿವಳಿಯನ್ನು ।। ।। 8 ।।

ಸಿರಿವತ್ಸ ಕೌಸ್ತುಭ ಹಾರಾ ಮೇಲೆ ಉರವೈಜಯಂತಿ ಮಂದಾರಾ ಮಾಲೆ
ತರುಣ ತುಲಸಿ ಜನಿವಾರ ಒಪ್ಪಿ ವರ ಬಜಕೀರ್ತಿ ಕುಂಜರಾ ಆಹಾ
ಕರಿಯು ಕರದ ತೆರದಿ ತೋಳೆರಡೊಂದಾರು ಸಾವಿರ ರೂಪ
ಶರೀರದೊಳಿಪ್ಪ ವೆಣ್ಣನಾ ।। ।। 9 ।।

ನಕ್ಕರಿದುಟಿ ಕೂರ್ಪುಕದವು ಕಣ್ಣಿಗಿಕ್ಕಿದ ಸೊಬಗಿನ ಕಪ್ಪು ತಲೆ
ಹಿಕ್ಕಿ ಬಾಚಿದ ಕೇಶ ತಳವು ಸರ್ವ ದಿಕ್ಕು ಮೋಹಿಸುವಂಥ ವಲಪು ಅಹಾ
ಲಕ್ಕುಮೀದೇವಿಯು ಲೆಕ್ಕಿಸ ಮಗನನ್ನು ಪ್ರಕ್ಕಳಿಂದಲಿ ಪೆತ್ತ
ಅಕ್ಕೋಜದ ಬಲಿಯಾ ।। ।। 10 ।।

ತಾಯಿತ ಮುತ್ತು ಕರ್ಯಾಣ ತೋಳು ತಾಯಿತ ಬಂಧುರ ಮಣಿ ಪಂಕಿ
ಕೇಯೂರ ಪಲ್ಲವಮಾಣಿ ಉಪಾಯದಲ್ಲಿ ಗಟ್ಟಿ ಖಣೀ ಆಹಾ
ನೋಯಲು ಸುರರಿಗೆ ಪೀಯೂಷ ಉಣಿಸಿ ದೈತೇಯರ ಮಡುಹಿದ
ಮಾಯದ ಕನ್ನಿಕೆ ।। ।। 11 ।।

ಸೂಸುವ ದೊಂಬಲುದಂತಾ ಪಂಕ್ತಿನಾಸಾ ಮೂಗುತಿಯಿಟ್ಟು ಶಾಂತಾ ಸುಖ

ಲೇಸ ಹಾಸಾ ಜಗದಂತಾ ರಾಗ ಮೀಸಲ ರವಿ ಚಂದ್ರಕಾಂತಾ ಆಹಾ
ಸುಷುಪ್ತಿಯಾಲಿ ಭೂಶ್ವಾಸ ಬಿಡುವರ ಲೇಸಾಗಿ ಸಲಹುವ ಶೇಷನಾಮಕ
ದೋಷನಾಶಿನ ರೂಪನರೂಪ ॥ ॥ 12 ॥

ಎಸೆವ ಪಂಜರದೋಲೆ ಕಿವಿಯು ಪೊನ್ನ ಕುಸುಮ ಬುಗುಡೆ ಬಾವುಲಿಯಾ ತಿದ್ದಿ
ಕುಸುರವಿಕ್ಕಿದ ಸರಪಳಿಯಾ ಚಿನ್ನ ನೊಸಲ ಕುಂಕುಮ ರ್‍ಯಾಕಿಟಿಯಾ ಆಹಾ
ಎಸಳು ಕೇದಿಗೆ ಬಲು ಕುಸುಮ ಮುಡಿದದ್ದು ವಶವಲ್ಲೆ ಚೌರಿ
ಅರಿಷಣ ಪೂಸಿದ ಮೈಯ್ಯು ॥ ॥ 13 ॥

ಭ್ರೂಲತೆ ವಳಿಯು ಕಪೋಲ ಪೂಸ ಮೌಳಿ ಕೈಯಲ್ಲಿ ಕಡಗೋಲ ನೇಣ
ವಾಲಯು ಪಿಡಿದ ಸುಸ್ಸೀಲ ಧರರಾಳಿದ ಭಕ್ತವತ್ಸಲ ಶೂಲಿಯುನಟ್ಟಿದ
ಖೂಳವ ಸವದು ಹಿಯ್ಯಾಳಿಲಿ ಮೆರೆದ ಗೋವಾಲನೆಂಬೊ ಹೆಣ್ಣು ॥ 14 ॥

ರಜತಪೀಠ ಪುರದೀಶ ನಂದವ್ರಜದೊಳಾಡಿದ ಸರ್ವೇಶ ನಮ್ಮ
ವಿಜಯವಿಠ್ಠಲ ನಾರಿವೇಷಾ ತನ್ನ ನಿಜಭಕ್ತ ಮಧ್ವಮುನೀಶ ॥ ಆಹಾ
ಭಜನೆ ಮಾಡಲು ಮೆಚ್ಚಿ ತ್ರಿಜಗ ಮಧ್ಯದಲಿ ಸಹಜಗತಿ ಈ ವ್ರತ
ಸುಜನರಿಗೊಲಿದದ್ದು ॥ ॥ 15 ॥

## –67–

ರಾಗ ಕೇದಾರಗೌಳ – ಆದಿತಾಳ

ಪೂರ್ವಜನ್ಮದಿ ನಾ ಮಾಡಿದ ಕರ್ಮದಿಂ ।
ಉರ್ವಿಯೊಳು ಜನಿಸಿದೆನೊ ಕೃಷ್ಣ ॥ ॥ ಪ ॥

ಕಾರುಣ್ಯನಿಧಿಯನ್ನ ಕಾಯಬೇಕಯ್ಯ ಹರಿ ।
ಪಾರಿಜಾತಸ ಮುದ್ದುಕೃಷ್ಣ ॥ ॥ ಅ ಪ ॥

ಪುಟ್ಟಿದಂದಿನಾರಭ್ಯ ಸುಖವೆಂಬುದನರಿಯೆ ।
ಕಷ್ಟಪಟ್ಟೆನೂ ಕೇಳೊಕೃಷ್ಣ ॥
ತೊಟ್ಟಿಲಶಿಶು ತಾಯ್ಗೆ ಬಾಯ್ಬಿಟ್ಟು ತೆರೆದಂತೆ ಕಂ – ।
ಗೆಟ್ಟು ಶೋಕಿಪನೊ ಕೃಷ್ಣ ॥

ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ ।

ಅಡ್ಡಿ ಬರುತಹಲಿಹರೋ ॥
ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ ।
ಮುಟ್ಟುವುದು ದೂರು ನಿನಗೆ ಕೃಷ್ಣ ॥ ॥ 1 ॥

ಕಾಸಿನಾ ಆಸೆಯಲಿ ಬಯಸಿ ಬಹುದಿನದಿಂದ ।
ಘಾಸಿ ಪಟ್ಟೆನು ನಾನು ಕೃಷ್ಣ ॥
ಈ ಶರೀರವನಾಂತು ಕೃಷ್ಣ ಪಟ್ಟಿನುಬಿಡದೆ
ನೀ ಸಲಹಬೇಕಯ್ಯ ಕೃಷ್ಣ ॥

ಹೇಸಿಕೆಯಾಗಿರ್ದ ಸಂಸಾರದವನು ಮಾಯಾ ।
ಪಾಶದಿ ಬಿಗಿವರೇ ಕೃಷ್ಣ ॥
ಘಾಸಿಯನು ಮಾಡದೆ ದೋಷವನು ಪರಿಹರಿಸೊ ।
ನಾಸಿರನಾವುದ ಮುದ್ದುಕೃಷ್ಣ ॥ ॥ 2 ॥

ಲೋಕದೊಳು ಎನ್ನಂದ ಪಾಪಿಗಳು ಉಂಟೆಂದು ।
ನೀ ಕೇಳಿ ಎನಗೊಂದು ಗತಿಯ ತೋರಿಸಿ ಸದ್ವಿ- ।
ವೇಕಿಯನು ಮಾಡಯ್ಯ ಕೃಷ್ಣ
ರಾಕೇಂದು ಮುಖಿ ದ್ರೌಪದಿಯ ಮಾನವನು ಕಾಯ್ದು ।
ಆಕೆಗಕ್ಷಯ (ವಸ್ತ್ರವ) ನಿತ್ತೆ ಕೃಷ್ಣ ಪಿ
ನಾಕಿಯ ಸಖ ಉಡುಪಿ ಆದಿಕೇಶವರಾಯ
ಸಾಕಾರ ಮೂರುತಿಯೆ ಕೃಷ್ಣ ॥ ॥ 3 ॥

-67-

ಉಡುಪಿಯ ಕೃಷ್ಣನಿಗೆ ವಾರದ ಏಳು ದಿನಗಳಲ್ಲಿ ಮಾಡುವ ಅಲಂಕಾರಗಳು ರವಿವಾರ–ಸೂರ್ಯ ಸೋಮವಾರ–ಗೋಪಾಲ, ಮಂಗಳವಾರ–ಕಿರಾತ, ಬುಧ ವಾರ ಮತ್ತು ಗುರುವಾರ–ವಿಪ್ರವೇಷ, ಶುಕ್ರವಾರ–ಮೋಹಿನಿ ಶನಿವಾರ–ವೆಂಕಟರಮಣ ಹೀಗೆ ಹರಿಯು ಸರ್ವರೂಪಧಾರಿ ಎಂಬುದು ಇಲ್ಲಿ ಸುವ್ಯಕ್ತ ವಾಗುತ್ತದೆ

-68-

ರಾಗ ಪೂರ್ವಿ – ಆದಿತಾಳ

ಬಣ್ಣಿಸಲಳವೆ ನಾನು ಬಣ್ಣಿಸಲಳವೆ ನಾ ಬಹುವೇಷವುಳ್ಳ ಲಾ-
ವಣ್ಯದ ಖಣಿಯಾದ ಉಡುಪಿನ ಕೃಷ್ಣನ ॥ ॥ ಪ ॥

ಕರಗುವ ಮಿಸುನಿಯ ಕಾಂತಿಯಿಂ ಗರುಡನ
ಗರಿಗಳ ಇರವ ಧಿಕ್ಕರಿಪ ಪೀತಾಂಬರ
ಎರಡು ಪಾರ್ಶ್ವಗಳಲ್ಲಿ ಶಿರದ ಕಿರೀಟವು
ಕೊರಳ ಹಾರದ ಜೋಡು ಇರಲು ಈ ಪರಿಯಿಂದ
ಮೆರೆಯಲಬ್ಜದ ಕಂಕಣ ಭೂಮಿಗೈದುವ
ವರ ಸೂರ್ಯನಾರಾಯಣ ಬಾಹುಗಳುಳ್ಳ
ಮಕರ ಕುಂಡಲ ಬಾಹುಪುರಿಗಳಿಂದೆಸೆವನ ॥ ॥ 1 ॥

ಅಳಿಗಳ ಕೂಟದಿ ಪೊಳೆವ ನೆತ್ತಿಯ ಗೊಂಡೆ
ಎಳೆಯ ಮುತ್ತಿನ ಸರ ದುಂಡು ರಕ್ಷಾಮಣಿ –
ಗಳ ಕೂಟ ಪೂಳೆಯಲು ಕೆಂಪುದಗಲೆಯಿಂದ
ಕೆಳಗಾಗಲರುಣನ ಗರಿ ಪಾದ ಕಂಸೆಯ–
ಗಲಿ ಇಂದ್ರ ನೀಲದದಾಳ ದಿಕ್ಕುಗಳನ
ಬೆಳಗುತಲೆ ಬಹಳ ಲೀಲೆಯ ತೋರ್ಪ
ಖಳರದೆ ಶೂಲನ ಚೆಲುವ ಗೋಪಾಲನ ॥ ॥ 2 ॥

ಜಾತಿಮುತ್ತಿನ ಚುಂಗು ಖ್ಯಾತಿಯಿಂದೊಪ್ಪುವ
ಚಾತುರ್ಯದಿ ಪಾರೆಗೊಂಡಯಕಟ್ಟ
ಆ ಜೂತದಿಂದಲಿ ಅತಿ ಮೈಜೋಡು ತೊಟ್ಟು ಈ
ರೀತಿಯಿಂದೆಡಗೈಯ ವಂಕಿ ಮಧ್ಯದೊಳಾನು–
ಚ್ಯುತ ಖಡ್ಗದಿಂದೊಪ್ಪುವ ಭೂತಳದಿ
ವಿಖ್ಯಾತಿ ಹೊಡೆದು ಮೆರವ ದುಷ್ಟ ಮೃಗವ
ಘಾತಿಸಿ ಬಿಡುವ ಕಿರಾತ ಸ್ವರೂಪನ್ನ ॥ ॥ 3 ॥

ಮಿನುಗಿಯ ಮುಂಡಾಸು ಪೊಸರವಿಯಂತಿರೆ
ಶಶಿಯ ಪ್ರಭೆಯಂತೆ ಪಸರಿಸಲಂಗಿಯು
ಹಸನಾದ ಸಪರಂಜು ವಶದಲ್ಲಿ ತುಂಬಿರೆ
ಕುಸುಮಸಂದದಿ ಧೋತ್ರದಿ ಉಟ್ಟು
ವೈರ್ಪನವ ಸುತ್ತಿ ಗಾತ್ರದಿ ಕುಲಾಯಿ ಒಪ್ಪಿ
ನಸುನಗೆಯಿಂದೊಪ್ಪುವ ನವವಿಪ್ರವೇಷನ್ನ ॥ ॥ 4 ॥

ಕಡೆದ ಬೊಗರಿಯಂತೆ ಕಡೆದು ಮಾಡಿದ ಬಾಹು
ಧೃಢವಾದ ಕಾಜೆಗಳು ದುರಿತದುನ್ನತವಾದ
ಬಡನಡು ಬಳುಕಲು ಕಡೆಗಣ್ಣ ನೋಟದಿ

ಮೃಡ ಮುಖ್ಯರ್ಮೋಹಿಸಿ ಒಡಲ ಪಾರದಿರಲು
ಮುಡಿಯು ನೋಡುತ ನವಿಲು ನಾಚಿ ಪೋಗ
ಒಡೆದಡವಿಯು ಸೇರಲು ಭೂಷಣಗಳು
ಜಡಿವುತ್ತ ಜಗದೊಳು ಕಡುಮೋಹಿಸೀಬಲು ॥ ॥ 5 ॥

ಶಂಕೆ ಇಲ್ಲದ ಕರ್ಮ ಕಿಂಕರರೊಳಗಾಗಿ
ಟೊಂಕದಿ ಕೈಯಿಟ್ಟು ಶಂಕಿಸಲು ತನ್ನಂಘ್ರಿ
ಪಂಕಜಂಗಳ ಬೇಡಿ ಪುರುಷಾರ್ಥ ಪಡೆಯಿರೊ
ಶಂಕೆ ಬೇಡವೋ ಎಂದು ಲೆಂಕರಿಗೆ ಸಾಸಿಪ್ಪ–
ಸಂಖ್ಯಾತ ಕರಯುಗಳಿಂದೊಪ್ಪುವ
ಶಂಖ ಚಕ್ರ ಆಯುಧಂಗಳ ಪಿಡಿದು ಸರ್ವಾ–
ಲಂಕಾರದಿಂ ವೆಂಕಟೇಶನ ರೂಪ ॥ ॥ 6 ॥

ಈ ವಿಧ ತಪ್ಪದೆ ಏಳು ದಾರಗಳಲ್ಲಿ
ಪಾವನಮಾತೆಗುರು ಒಳಿಗೆ ಬಂದವರೆಲ್ಲ
ಶ್ರೀವರ ಹಯವದನ ಸೇವೆಗೊಳ್ಳಿರೊ ನಿತ್ಯ
ಆವಾವ ನಾಡಿನ ಆಶ್ರಿತ ಜನರನ್ನು
ಭಾವಶುದ್ಧಗಳರಿತು ಕೋರಿಕೆಗಳ
ಈವ ಭಕ್ತರಿಗೊಲಿದು ಪಾಷಂಡಾದಿ
ಶೈವರ ತರಿದ ಸದ್ವೈಷ್ಣವರ ದೇವನ್ನ ॥ ॥ 7 ॥

## –69–

ರಾಗ , ಧನ್ಯಾಸಿ – ಆದಿತಾಳ

ಬಾರೊ ಬೇಗ ನೀರಜಾಕ್ಷ । ದೂರು ಇದು ಯಾತಕೊ ॥ ॥ ಪ ॥

ಮೊಸರು ಮಾರುವ ಗೊಲ್ಲತಿಯರ 1 ಅಸವಳಿಸಿ ಕೈಯ ಪಿಡಿದು ॥
ವಶವಾಗು ಎಂದು ಪೇಳಿ ॥ ನಸುನಗುತಲಿದ್ದೆಯಂತೆ ॥ ॥1॥

ಕುಸುಮಶರನ ಪತ್ತವನೆ । ಬಸವನಾದೆ ಊರೊಳಗೆ ॥
ಶಶಿ ಮುಖಿಯರ ದೂರು ಬಹು 1 ಪಸರಿಸಿತು ಪೇಳಲಾರೆ ॥ ॥ 2 ॥

ಕಂದ ಕೇಳು ಇಂದುಮುಖಿಯರ 1 ಹೊಂದಿ ಆಡಲೇಕೆ ಈ ॥
ಮಂದಿರದೊಳಾಡಿ ಸಲಹೊ ತಂದೆ ಉಡುಪಿ ಸಿರಿಕೃಷ್ಣ ॥ ॥ 3 ॥

## –70–

ರಾಗ . ಭೂಪಾಳಿ – ಏಕತಾಳ

ಬಿಡದೆ ಭಜಿಸಿ ಬೊಮ್ಮ ಮೃಡ ಮುಖ್ಯ ಸುರರಿಗೆ
ಒಡೆಯನೆನಿಪ ಮುದ್ದು ಉಡುಪಿಯ ಕೃಷ್ಣನ ।। । ಪ ।

ಪೊಡವಿಯೊಳಗೆ ತನ್ನ ಅಡಿಗಳ ಧೇನಿಸಿ–
ರಡಿಗಡಿಗವರ ವಾಂಛಿತ ವಸ್ತುವ
ಕಡೆದು ಕೊಡುವೆನೆಂದು ಕಡೆಗೋಲು ನೇಣನ
ಪಿಡಿದಿಹ ಸಿರಿಯರಾ ದೃಢಕೆ ಮೆಚ್ಚಿದವನ ।। । 1 ।

ಹರಿಸರ್ವೋತ್ತಮನೆಂಬೊ ವರಮಸಿದ್ಧಾಂತಕ್ಕೆ ಮ–
ಚ್ಚರಿಸುವ ಕುಮತದ ಕುಜನರ
ಭರದಿ ಬಂಧಿಸಿ ಬನ್ನ ಬಡಿದು ಶಿಕ್ಷಿಪೆನೆಂದು
ವರಪಾಶದಂಡಧಾರಿಯಾಗಿ ತೋರಿಪ್ಪನ ।। । 2 ।

ಭಕ್ತವತ್ಸಲನೆಂಬೊ ಸುಲಭೋಕ್ತಿಯನು ಬುಧ
ನಿಕರಕ್ಕೆ ಪೇಳಲು ದ್ವಾರಕಾಪುರಿಯ
ಸುಖತೀರ್ಥ ಮುನಿಗೆ ಸುಖಕರನಾಗಿ ಬಂದ
ಅಕುಟಿಲ ಕೃಷ್ಣ ಹಯವದನರಾಯ ।। । 3 ।

## –71–

ರಾಗ ತೋಡಿ – ಆಟತಾಳ

ಬಂದಾನೋಡಿ, ಗೋವಿಂದ ಕೃಷ್ಣ ।ಪ। ಬಂದ ಬಂ
ದ ಆನಂದ ತೀರ್ಥ ಮು । ನೀಂದ್ರ ವಂದ್ಯ ಹರಿನಂದ ಮು–
ಕುಂದನು ।।ಅ, ಪ।। ಸರಸಿಜಾಕ್ಷ ಹರಿಯೇ ಸರ್ವರ । ಪೊರೆವ
ದಯಾನಿಧಿಯೇ ।। ಕರಿಯುವರನ ಚಕ್ರದಿ ಉದ್ಧರಿಸಿದ ಹರಿ
ನಮ್ಮ ಪಾಲಿಪ ಪಾಲ್ಗಡಲೊಡೆಯನು ।1। ಇಂದ್ರದೇವ
ವಂದ್ಯ ಇಷ್ಟರ–। ಸಿಂದುಕಾಯ್ವ ನಿತ್ಯ ।। ಚಂದ್ರ
ಕೋಟಿ ಲಾವಣ್ಯ ಮುಖದಲಿ । ಸುಂದರ ಅರಳೆಲೆ ಹಾರ
ಗಳಿಂದಲಿ ।। 2 ।। ಚರಣಕಮಲಕಾಂತೆ ಸರ್ವದಾ । ಮಾ

ಳ್ಳಿದು ದಯುವಂತೆ 11 ಪರ ಘರ ಜನರಿಗೆ ಕರದುವರವ
ನೀವ 1 ಸರಸಿಜಾಕ್ಷ ನಮ್ಮ ಪ್ರರಂದರ ವಿಠಲನು ॥ 3 ॥

## –70–

ರಾಗ ಆನಂದ ಭೈರವಿ – ಆದಿತಾಳ

ಬಂದು ನಿಲ್ಲೋ ದಯಾಂಬುಧೆ 1 ಬಂದು ನಿಲ್ಲೋ ॥ ಪ ॥

ಬಂದು ನಿಲ್ಲೋ ನಿನಗೊಂದಿಸುವೆನು 1 ಗೋವಿಂದ ಗೋಪಳ
ರಾಯ ಸಂದೇಹಗೊಳದಲಿ 11 ಸದೋಚಿಯುನಾನು ಸದಾ ನಿರ್ಮಲ
ನು ನೀನು ಪದೋಪದಿಗ ಪೇಳುಪ್ರದಚಿತವಾಗೋ ॥ 1 ॥ ಮನ
ದೊಳು ಪೊಳೆದು ಚಿಂತಸಗೆ ಸರೆಯಾಗಿ 1 ಪನ ಮಹಿಮ
ನೆ ಮಧ್ವ ಮುನಿಮಂದಿರ ॥ 2 ॥ ಕಡೆಗೋಲ ನೇಣ ಪಿಡಿವ
ಪರಮಾನಂದ ಉಡುಪಿಯ ಶ್ರೀಕೃಷ್ಣ ವಿಜಯವಿಠಲರಾಯ ॥ 3 ॥

## –72–

ರಾಗ ಹಿಂದೋಳ – ಆದಿತಾಳ

ಬಂದೆನಿಲ್ಲಿಗೆ ನಂದರುಶನಕ್ಕೆ ಬಂದೆನಿಲ್ಲಿಗೆ ।। ಬಂದೆನಿಲ್ಲಿಗೆನ್ನ
ಮನದಿ 1 ಬಂದು ನಿಲ್ಲಿಂದು ನಿನ್ನ । ವಂದಿಸೊಪರ ಬೇಡುವೇನು 1 ನಂದನಂದನ
ನುಂದರಕೃಷ್ಣ ಬಂದೆನಿಲ್ಲಿಗೆ ॥ ಪ ॥ ಪಾಲು ಶರಧಿ ಆಲದೆಲೆಯ ಯೋಗ
ನಿದ್ರೆ ಮಾಡಿ 1 ನಿನ್ನ 1 ನಾಭಿಕಮಲನಾಳದಿಂದ ಆಗೆ ಅಜನ ಪಡೆದ ಹರಿಯೆ
॥ ಬಂದೆನಿಲ್ಲಿಗೆ ॥ 1 ॥ ಸಾಗರವ ಬಿಟ್ಟು 1 ನಾಗಶಯನ ಸೂರ ನುತನಲುದಿಸಿ
ಯೋಗಿಗಾಳ । ಹೃದಯ ಕಮಲ 1 ಆಲಯವ ಮಾಡಿದ್ದ ದೊರೆಯೆ ॥ 2 ॥ ಕಂ
ದನಾಗಿ ಬಂದು । ಕಾಳಿಂದಿ ದಾಟಿ 1 ನಂದ ಗೋಕುಲ । ವೃಂದಾವನದಿ ಗೋವು
ಕಾಯ್ದ 1 ಇಂದಿರೇಶ ವಿಜಯ ಸಖನೇ ॥ 2 ॥ ಅಷ್ಟ ಮಠದಯತಿಗಳಿಂದ
ಮುಟ್ಟಿ ಪೂಜೆಗೊಂಬುವಂಥ 1 ಶ್ರೇಷ್ಠರೊಳಗೆ ಶ್ರೇಷ್ಠ 1 ನಿನ್ನುತ್ಕೃಷ್ಟಮಹಿಮೆ
ನೋಡಲೀಗ ॥ 4 ॥ ಕುಜನ ಜನರ ತುಳಿವ ಕಾಲ 1 ಕಡಗವೆಂಡೆ 1 ಗೆಜ್ಜೆ ಸರ–
ವಳಿ ॥ ಧ್ವಜ ವಜ್ರಾಂಕುಶರೇಖಿವುಳ್ಳ 1 ಪದುಮಪಾದವ ನೋಡಲೀಗೆ ॥ 5 ॥
ನೊಡ್ಡ ಮುತ್ತು ವಜ್ರಧಾರಳಿ ನಡ್ಡಿಕಿ 1 ವುಡುದಾರ ಹೊಳಿಯೆ 1
ವಧ್ಯಾರಾವನೆಯಿಟ್ಟಾ । ರಘುಂಗೆ ಜಾನು ಧ್ವಯವ ನೋಡಲೀಗೆ ॥ 6 ॥

ಉದರದಲ್ಲೀರೇಳು ಲೋಕ । ಅಡಗಿಸೀದನಂತಶಯನ । ಪದುಮಪೂಕ್ಕಳಿಂದೆ
ಬ್ರಹ್ಮನ ಪಡೆದ ಪರಮಾತ್ಮನನೋಡಬಂದನಿಲ್ಲಿಗೆ ॥ 7 ॥ ವಂಕಿ ಬಾಹುಪ್ಪುರಿ-
ಗಳಿಂದೆ । ಕಂಕಣ ಭೂಷಣಗಳೊಪ್ಪೊ । ಶಂಖಚಕ್ರಪಿಡಿದ । ಅಖಿಳಾಂಕ
ಮಹಿಮನಾ । ಕರವ ನೋಡಬಂದನಿಲ್ಲಿಗೆ ॥ 8 ॥ ನೀಲವರ್ಣ ನಿನ್ನಾ
ಬೆರಳು । ನಾಲುಮಾಣಿಕ್ಯ ಮುದ್ರಿಕೆಯಿಂದೂಳಿಪೊ । ಲೀಲೆಯಿಂದ ಗಿರಿ
ಯ ನತ್ತಿದ । ಗೋಪಾಲಕೃಷ್ಣ । ನಿನ್ನ ನೋಡಬಂದೆನಿಲ್ಲಿಗೆ ॥ 9 ॥ ಹಾರ
ಪದಕ ವೈಜಯಂತಿ । ತೋರ ಮುತ್ತಿನಸಳೆಗಳೊಪ್ಪಿಳವೂ ।
ಶ್ರೀ ದೇವೇರಿಗಾಶ್ರಯವಾಗ್ವಿಶಾಲ । ವಕ್ಷಸ್ಥಳವನೋಡಬಂದೆ –
ನಿಲ್ಲಿಗೆ ॥ 10 ॥ ಪಚ್ಚ ಪದಕ ಪಾರಿಜಾತ । ಉಚ್ಚಮಲ್ಲಿ ತುಳಸಿಮಾಲಿ ।
ಶ್ರೀವತ್ಸ ಕೌಸ್ತುಭ ಶೃಂಗಾರ ಕೊರಳ । ಶಿರಿಯಪರಸು ನಿನ್ನ ನೋಡಬಂದೆ
ನಿಲ್ಲಿಗೆ ॥ 11 ॥ ಮಧ್ವರಾಯರು ಕೈಯಬೀಸ । ಎದ್ದು ಬಂದ ಹಡಗದಿಂದ-
ಲ್ಲಿದ್ದ । ನುಡುಪಿಕ್ಷೇತ್ರದಿಯೆಂದು । ಮುದ್ದುಕೃಷ್ಣನ ಮುಖವ ನೋ –
ಡ ಬಂದೆನಿಲ್ಲಿಗೆ ॥ 12 ॥ ಕ್ರೂರ ಕಂಸನಪ್ಪಳೀಸಿ । ದ್ವಾರವತಿಯಲ್ಲಿದ್ದ
ಅಷ್ಟ ಭಾರ್ಯೆರಿಂದ್ವಿಹಾರ । ಮಾಡಿದ್ವಾರಿಜಾಕ್ಷನೂಪನ ನೋಡಬಂದೆ
ನಿಲ್ಲಿಗೆ ॥ 13 ॥ ಚಂದ್ರನಂತೆ ಹೊಳೆವ ಮುಖದಿ । ದುಂಡು ಮುತ್ತಿನ
ಮುಗುತಿನಿಟ್ಟು । ಕುಂದರಾದೊಜ್ರ ಬಿಗದ । ಕರ್ಣಕುಂಡಲವನ್ನು ನೋಡ –
ಬಂದೆನಿಲ್ಲಿಗೆ ॥ 14 ॥ ಬಾಲಭಾಸ್ಕರ ಕೋಟಿ ಲಾವಣ್ಯ ರೂಪ । ಗೆಲಿಪೊ
ಕಾಂತಿ । ನಾಲು ದೀವಿಗೆ ನೊಭಗು । ಕಮಲದಳಾಯತಾಕ್ಷ ಹರಿಯ ।
ನೋಡ ಬಂದೆನಿಲ್ಲಿಗೆ ॥ 15 ॥ ಕರ್ಪೂರಾ ಕೇಸರಿಯು ಗಂಧ । ಕಸ್ತು –
ರೀಯ ನಾಮ ತಿಲಕ । ಪಪ್ಪ ಪಜ್ರದರಳೆಲೀ । ದೇವಕ್ಕಿ ಸುತನೇ ।
ನಿನ್ನ ನೋಡಬಂದೆನಿಲ್ಲಿಗೆ ॥ 16 ॥ ಕೆಂಪು ಹರಳು ಝಗ ಝಗಿ -
ನುಪೊ । ಪಂಚರತ್ನದಾ ಕಿರೀಟ । ಚಂಚಲಾಕ್ಷ ಚರಿಯ ಶಿರದಿ । ಮುಂ
ಚೆ ನೋಡಿ ಮುಗಿಯೆ ಕೈಯ ।। ಬಂದೆನಿಲ್ಲಿಗೆ ॥ 17 ॥ ಅಸುರ
ರೊಂಚಿ ನಮೃತ ಬೀರಿ । ಪಶುವಾಹನಗೆ ಮೋಹತೋರಿ । ಮೋ -
ನದಿಂದ ಭಸ್ಮಾಸುರನ । ನಾಶಮಾಡಿದ ನಾರಿ ನೋಡ । ಬಂದೆನಿಲ್ಲಿಗೆ ॥ 18 ॥
ಲವಣ ಶರಧಿ । ತೀರ ಮಧ್ವ ನರೋವರದಲಿ ಶುದ್ಧಸ್ನಾನ
ಪರಮ ಮಂತ್ರ । ಜಪಿನೊ ನಿನ್ನ । ಶರಣು ಸುಜನ ಜನರ ನೋ
ಡ ಬಂದೆನಿಲ್ಲಿಗೆ ॥ 19 ॥ ಉತ್ತುಮಾವೈಕುಂಠ । ಬಿಟ್ಟೀ ಉಡು
ಪಿಯಲ್ಲಾವಾಸವಾಗಿ । ಭಕ್ತಜನಕಭೀಷ್ಟ । ಕೊಡುಪೊ
ನಿತ್ಯ ಮುಕ್ತ ನಿನ್ನಾ ನೋಡಬಂದೆನಿಲ್ಲಿಗೆ ॥ 20 ॥ ಶ್ರೀಶನೊಲಿಸಿ
ಧನುಮ ಭಾರತೀಶನಾದ । ಮಧ್ವರಾಯರು । ದಾನರಾದಾನತ್ವ ।
ಕೊಡೊ ಭೀಮೇಶ ಕೃಷ್ಣಂದಯುಪದೆ ನೋಡ ಬಂದನಿಲ್ಲಿಗೆ ॥ 21 ॥

-74-

ರಾಗ ಪಂತುವರಾಳಿ – ಏಕತಾಳ

ಭಕುತರಪರಾಧವ ಬಗೆಯನೀ ದೇವ
ಬಕುತರ ತಪ್ಪಿದರೆ ಬಲು ಭಯವೀವ ॥ ॥ ಪ ॥

ಇಟ್ಟುಣಿಸಿದ ಬಲಿ ಕಟ್ಟಿದ ಯಶೋದೆಗೆ
ಇಷ್ಟಾರ್ಥಗಳನಂದು ಕೊಟ್ಟು ಕಾಯನೆ
ದುಷ್ಟತನದಿ ಧೃತರಾಷ್ಟ್ರತನಯ ತನ್ನ
ಕಟ್ಟಲು ಹವಣಿಸೆ ಕಷ್ಟವನುಣಿಸನೆ ॥ ॥ 1 ॥

ಕಾಲಲಿ ತನ್ನ ಅಂಗವನೊದ್ದ ಮುನಿಪನ
ಮೂಲೋಕಪರಿಯೆ ಮುದ್ದಿಸಿ ಪೊರೆಯನ
ತಾಳದೆ ನೃಪತಿಯ ತಾನೆಂದು ತಿಳಿಯಲು
ಕಾಲಯವನ ಬಂದು ಕಾಳು ಮಾಡಿಸನೆ ॥ ॥ 2 ॥

ಪರವಶಚಿತ್ತನಾಗಿ ಫಲುಗುಣ ಜರಿಯಲು
ಹರಿ ದೂರಾಗದೆ ಹರಣವ ಕಾಯನೆ
ಅರಸೆಂಬ ಗರ್ವದಿಂದ ಅರಿಘಟ ಪೌಂಡ್ರಕನ
ಧುರಕೆ ಗುರಿಯ ಮಾಡಿ ಧುರದಿ ಕೊಲಿಸನ ॥ ॥ 3 ॥

ಶರಕೆ ಗುರಿಯ ಮಾಡಿ ನಮರದೊಳೊಡ್ಡಿದ
ಸುರವ್ರತಗಂದು ಶುಭವನೀಯನೆ
ಹರನ ಮೆಚ್ಚಿಸಿ ತನ್ನ ಗೆಲುವ ಬಿಲ್ಲ ಬೇಡಿದ
ಶರೀರ ಸಂಬಂಧಿಯ ಕೊಲ್ಲಿಸನೆ ॥ ॥ 4 ॥

ಮಕುಟವ ಕದ್ದೊಯ್ಯಲು ಮಹಾಬಲಿಯ ಬಾಗಿಲ
ಅಳಳಂಕನಂದು ಕಾವುದ ಬಿಟ್ಟನೆ
ಈ ಕೃಷ್ಣ ಹಯವದನನಿಂದುಡುಪಿನ ಜನಕೆ
ಶೋಕ್ರವಿತ್ತ ಕಳ್ಳನಿಗೆ ಶೂಲಗತಿಯೀಯನೆ ॥ ॥ 5 ॥

-75-

ರಾಗ ; ಮಧ್ಯಮಾವತಿ – ಅಷ್ಟತಾಳ

ಭಜಿಸಿರೊ ಭವ ಭಂಜನ ಹರಿಯ
ರಜತಪೀರ ಪುರದಿ ರಾರಾಜಿಪ ದೊರೆಯ ॥ ॥ ಪ ॥

ದುಷ್ಟಿ ಪೃಥುಕವನ್ನು ಕೊಟ್ಟ ಕುಚೇಲಗೆ 1
ಶ್ರೇಷ್ಠ ಭಾಗ್ಯವನಿತ್ತ ಸಿರಿವರನ 11
ಅಷ್ಟ ಮಠೀಯರು ಮುಟ್ಟಿ ಪೂಜಿಸುವಂಥ ।
ವಿಠಲನಿಂದ ಸರ್ವಾಭೀಷ್ಟ ಪಡೆಯಿರಿ 11 11 1 11

ಯುಕ್ತಿಯುನರಿಯುದ ಭಕ್ತರಿಗಿಹಪರ 1
ಭುಕ್ತಿ ಮುಕ್ತಿದನೆಂಬ ಬಹುಬಿರುದ ।।
ವ್ಯಕ್ತ ಮಾಡುತ ಕಡುರಿಕ್ತ ಜನರ ಪಕ್ಷಾ 1
ನಕ್ತನಾಗಿಹ ಸೃಷ್ಟಿಸಕ್ತ ಮಾನನನನ್ನು 11 ॥ 2 ॥

ನಿರುತದಿ ನಿತ್ಯ ಮಧ್ವ 1 ನರಸಿಯೊಳಗೆ ಮಿಂದು 1
ಶಿರದಿ ಪಾದೋದಕ ಧರಿಸಿಕೊಂಡು ।।
ಉರಗಗಿರೀಶ ( * ) ನತ್ಯದರನ ಮೂರ್ತಿಯು ಕಂಡು
ಸುರವರ ಪ್ರಾರ್ಥನೀಯು ಪರಪುನಾದವನುಂಡು 11 11 3 11

( * ) ಇದು ತುಪಾಕಿ ವೆಂಕಟರಮಣಾಚಾರ್ಯರ ಕೃತಿ ಎಂದು ತಿಳಿದಿದೆ, ಆದರೆ ಇವರ ಅಂಕಿತ ' ಉರಗಗಿರೀಶ " ಎಂಬುದು ಸಂಧಿಗ್ಧ ವಿಚಾರವಾಗಿದೆ, ಏಕೆಂದರ ಇವರದೆಂದು ಹೇಳುವ ಮತ್ತೊಂದು ಕೃತಿಯಲ್ಲಿ "ವೆಂಕಟಾದ್ರಿ" ಎಂಬ ಅಂಕಿತವಿದೆ ಇದು ಯಾರ ರಚನಯೆಂಬುದು ನಿರ್ಧರಿತವಾಗಬೇಕಾದ ವಿಚಾರವಾಗಿದೆ

–76–

ರಾಗ : ಭೈರವಿ ಆಟತಾಳ

ಮನ್ನಿನೆನ್ನ ಮಧುಸೂದನ ।। ಪ ।।
ಮದನನಯ್ಯ ಮೋಹನಕಾಯು
ಉನ್ನತಗುಣನಿಲಯು ಉಡುಪಿನ ಕೃಷ್ಣರಾಯು ।। 11 ಅ.ಪ ।।

ಶ್ರುತಿಗಳ ತಂದ ಮುನ್ನ ಸುರಮುನಿಗಳ ಮನ –
ಕತಿ ಹರುಷವ ಕೊಟ್ಟೆ ಅಗಣಿತ ಗುಣರನ್ನ
ಯತಿಗಳ ಪಾಲಿಸಿದೆ ಮುಂದುವರಿವ

ದಿತಿಜರ ನೋಲಿಸಿವೆ ಈ ಮಹಿಯೊಳು
ಮತಿವಂತರ ಪೊರೆದೆ ಮಹಿಮೆಯಿಂದ ಪುರವೆ ll ll 1 ll

ಅಚ್ಚಹಾರ ಶೋಭಿತಕಂಠ ಆಶ್ರಿತರಿಗೆ ನೀನೆಂಬ
ಮೆಚ್ಚಿದ ಪಾರ್ಥನ ಮಿತ್ರನೆನಿಸಿದೆ ಸುಚರಿತ್ರ
ಮೆಚ್ಚಿದ ನಿನ್ನಯ (ಭಕ್ತಗ) ವೈಕುಂಠದ
ಮುಚ್ಚಲ ತೆಗೆನಲು ಶಕ್ತ ಅಚ್ಯುತ ನಿನ್ನ
ಅರ್ಚಿಸಿದವ ಕೃತಾರ್ಥ ಅವನ ಸರ್ವಸಮರ್ಥ ll ll 2 ll

ಎಂದೆಂದು ನಿನ್ನವರೊಳು ಎನ್ನ ಕೂಡಿಸೊಕೃಪಾಳು
ವೇದ್ಯ ಗರುಡನ ಸ್ಕಂದವೇರಿ ಬಹ ಗೋವಿಂದ
ತಂದೆ ನೀನೆ ತಾಯಿ ಹಯವದನ
ಬಂಧು ನೀನ ಬಳಗ ನೀನ ಪುತ್ರವರಿಂದ
ಕುಂದು ಮಾಡುವುದು ಬಿಡೋ ಕಂಡುಕರಣವ ಮಾಡೋ ll ll 3 ll

## –77–

ರಾಗ : ಮೋಹನ – ಏಕತಾಳ

ಮರೆತಿಯೊನೋ ರಂಗ ಮಂಗಳಾಂಗ ll ಪ ll ಕೋಲು ಕೈಯ
ಲ್ಲಿ ಕೊಳಲು । ಜೋಲುಕಂಬಳಿ ಹಗಲ l ಮೇಲೆ ಕಲ್ಲಿನ ಚೀಲ ಕಂಕು
ಳಲಿ ll ಕಾಲಿಗೆ ಕಡಗವು ಪಶು ಹಿಂಡು ಲಾಲಿಸುತ ।
ಬಾಲಕರ ಮೇಳದೊಳಗಿದ್ದ್ಯಲ್ಲೊರಂಗ ।। ಕಲ್ಲು ಮಣಿ ಕವಡೆ
ಚನ್ನ l ಗುಲುಗುಂಜಿ ವಡವೆ ನಾರಲು ನಿನ್ನ ಸರ್ವಾಂಗಕ್ಕೆ ll ಅಲ್ಲ
ಲ್ಲಿ ಗಳವಟ್ಟು ನವಿಲುಗರಿದಂಡೆ l ಅಲ್ಲಿ ಗೊಲ್ಲರಕೂಡೆ ಸಲ್ಲಾಪ
ವಾಡುತ್ತ ।। 2 ll ಸಿರಿದೇವಿ ಬಂದು ಸೇರಿದ್ದ ಬಳಿಕ ಲೋಕವೊಳಗೆ
ಸಿರಿಯರಸನೆಂಬುವರು ।। ಪರಮ ಮುಖ್ಯಪ್ರಾಣವಂದಿತ
ಉಡುಪಿಯ ನೆಲೆಯ ಶ್ರೀ । ಪುರಂದರವಿಠಲ ಕೃಷ್ಣ ನೀ ಮರೆತೀಯೆ l 3 ll

## –78–

ರಾಗ . ಮೋಹನ – ಆದಿತಾಳ

ಮಹಿಮೆಯನಾರು ಬಲ್ಲರು
ನಹಿಪ್ರತಿಯೆಂದು ನಿನ್ನ ಪಾಡುವರಲ್ಲದೆ ll ll ಪ ll

ವಾಮನನಾಗಿ ಬಂದು ಬಲೀಂದ್ರನಿಗೆ ಸಂದ
ಸೀಮೆಯನೆಲ್ಲವ ಸಲೆಬಿಟ್ಟ ತ್ರಿವಿಕ್ರಮ ನಿನ್ನ
ಸಾಮರ್ಥ್ಯವ ಶ್ರುತಿಗಳ ಪೇಳೆ ಉಗುರ್ಗೊನೆ
ಆ ಮಹಾ ಬೊಮ್ಮಾಂಡವ ಸೀಳೆ ದೇವೇಂದ್ರನು
ಸಾಮ್ರಾಜ್ಯದಿ ಸುಖದಿಂ ಬಾಳೆಕೃಷ್ಣ ನಿನ್ನ ॥ ॥ 1 ॥

ಇಂದ್ರಕೋಪಿಸಿ ಮಳೆಗರೆಯಲು ನಿನ್ನ
ತಂದೆ – ತಾಯಿ ಬಂಧು ಬಳಗಂಗಳೆಲ್ಲ ಕಂಗೆಡಲು
ಅಂದು ಬಲುಗಿರಿಯನೆತ್ತಿ ಗೋಗೋಪಾಲರ
ವೃಂದದ ಭಯವ ನುಗ್ಗೊತ್ತಿ ಪಾಲಿಸಿದೆ
ಚಂದದಿ ನಿನ್ನಯ ಸಂಪತ್ತಿ ಕೃಷ್ಣ ನಿನ್ನ ॥ ॥ 2 ॥

ಇಂದು ಮಧ್ವ ಮುನೀಂದ್ರಗೊಲಿದು ಕಡುಕೃಪೆಯಿಂದ
ತಂದೆ ಹಯವದನ ಮುಕುಂದ ಉಡುಪಿಸೂಳಗೆ
ನಿಂದು ಸದಾ ಪೂಜಿಸಿಕೊಂಡೆ ನಿನ್ನಮುಂದೆ
ನಂದಾದೀಪಗಳನು ಕಂಡೆ ಭಕ್ಷ್ಯಭೋಜ್ಯ
ಕಂದಮೂಲ ಫಲಂಗಳುಂಡೆ ಕೃಷ್ಣ ನಿನ್ನ ॥ ॥ 3 ॥

–79–

ರಾಗ · ಕಲ್ಯಾಣಿ – ತ್ರಿವಿಡಿತಾಳ

ರಜತಪೀಠದ ಯಾತ್ರೆ ರಜೋತಮಗುಣವುಳ್ಳ
ಪ್ರಜರಿಗೆ ದೊರಕುವದೆ ತ್ರಿಜಗದೊಳಗೆ ಮುಂದ
ಅಜನಾಗಿ ಬಪ್ಪಗೆ ಭಜನೆ ಮಾಡುವಂಥ ಸುಜನರಿಗಲ್ಲವೆ ॥ ॥ ಪ ॥

ಮಂದಾಕಿನಿ ಮಿಕ್ಕಿದ ನದಿಗಳಲ್ಲಿಗೆ ಪೋಗೆ
ಮಿಂದು ನಾನಾ ಕ್ಷೇತ್ರವ ಒಂದೂಬಿಡದೆ ತಿರುಗಿ
ವೇದಶಾಸ್ತ್ರಗಳು ಚಂದದಿ ಒದಿಕೊಂಡು
ಕುಂದದೆ ವ್ರತ ಯಾಗ ಯೋಗ ಮಾಡಲೇನು
ಬಂದು ಮಾತ್ರ ಫಲವಿಲ್ಲ ವೃಂದಾರಕಸುರರು
ಒಂದಾಗಿ ಬಂದು ದಿನ ಅಂದು ಪೀಯೂಷವಕಟಿಯೆ ಉಂಡವರ್ರಾರು ॥ 1 ॥

ಕ್ರೀಡೆಯಲಿ ತ್ರಿಪುಂಡ್ರವ ಧರಿಸಿದ ಮಾನವಾ
ನಾಡೊಳು ಉಡುಪಿಯಾತ್ರೆಯು ಮಾಡಿದವರಿಗೇನುರೇಶ ಸತ್ಕಾರ್ಯವು
ಕೂಡಲು ಕೂಡದಯ್ಯ ಬಿಡಾಲನಂದದಿ ತಿರುಗುವಂತಾಗುವುದು
ಕೇಡಿಗೆ ಗುರಿಯಾಗುವ ಜೋಡು ಇಲ್ಲಿಗೆ ಬಂದು ತಿರುಗಿ ಪೋದರೇನು 1
ಆಡಲೇನದಕೆ ತಿಲಾಂಶ ಸುಖವುಂಟೆ 11 ॥ 2 ॥

ತಪೋಯೋಗ್ಯ ಉಡುಪಿಯು ಯಾತ್ರೆಮಾಡಲು
ಅಮಿತ ಬಲವಂತನಾಗಿ ಯುಮನದ್ರುಶನಾದ ಯುವಸದಲ್ಲಿ ಪುಟ್ಟಿ
ಕ್ರಮಿಸಿ ಪುಣ್ಯವನ ಕೆಡಿಸಿ ತಮನಕೆ ಸಾಧನವಾದ ಸುಖವಟ್ಟು ಬಹುಕಾಲ
ರಮಣಿ ಮಕ್ಕಳು ಸಹಿತದಿ ಕ್ರಿಮಿ ಮೊದಲಾದ ನರಕವನುಂಡು ಅವನಿತ್ಯ
ತಮಸಿನೊಳಗೆ ವಾಸಫಲ ವ್ಯರ್ಥವಾಗದು ॥ 11 3 11

ರಾಜನಗುಣದಲ್ಲಿ ಈ ಯಾತ್ರೆ ಮಾಡಲು ರಾಜಕುಮಾರನಾಗಿ
ತೇಜೋಮಯಾಭರಣ ಭೂಷಣವನೆ ಇಟ್ಟು
ವಾಜಿಗಜವಾಗಿ ಸೌಖ್ಯ ಈ ಜಗದೊಳು ಪಟ್ಟುಪೋಗೋದಲ್ಲದೆ
ವಿರಾಜಿನುವುದು ಬಲ್ಲದೆ ರಾಜಮಂದಿರಕೆ ನವರತ್ನ ಕೆತ್ತಿಸಿದರಂತೆ
ಈ ಜನದ ಸುಖದ ಫಲ ವ್ಯರ್ಥವಾಗದು ॥ 4 11

ಮುಕ್ತಿಯೋಗ್ಯನು ಬಂದು ಯಾತ್ರೆಯು ಮಾಡಲು
ಮುಕ್ತಿಯುತ್ತಮ ಕುಲದಲ್ಲಿ ವ್ಯಕ್ತನಾಗಿ ದಿವ್ಯ ಮಾನದಲ್ಲಿ ವಿ
ರಕ್ತಿ ಬಕ್ತಿ ಜ್ಞಾನದಲೆ ಬಾಳಿ ಶಕ್ತನೆಂದೆನಿಸಿ ಸತತ ಶ್ರೀಮದಾರ್ಯರ
ಭಕ್ತಿಲಿ ಲೋಲಾಡುತ ಭಕ್ತವತ್ಸಲ ವಿಜಯವಿಠ್ಠಲ ಕೃಷ್ಣನಾರ
ಬೋಕ್ತನಲ್ಲಿಪ್ಪನು ಫಲವ್ಯರ್ಥವಾಗದು 11 ॥ 5 11

–80–

ರಾಗ ಪೂರ್ವಿಕಲ್ಯಾಣ – ಆದಿತಾಳ

ರಜತಪೀಠದೇ ಭೂವೈಕುಂಠ । ಇಲ್ಲಿ ಮಧ್ವ ಪುಷ್ಕರಿಣಿ
ಯೆ ವಿರಜೆ 11 ಅಲ್ಲಿ ರಾಜಿವರಷ್ಟ ಮಹಿಷಿಯರು 1 ಇಲ್ಲಿ
ರಾಜಿವರಷ್ಟಯತಿಗಳು 11 ಪ 11 ಅಲ್ಲಿ ಎಲ್ಲರೊಳಗಿರುವದು
ಭಕ್ತಿ । ಇಲ್ಲಿ ಎಲ್ಲಿ ನೋಡಲು ವಿರಕ್ತಿ 11 ಅಲ್ಲಿಪ್ಪ ಜನರಿಗೆ
ಮುಕ್ತಿ 1 ಇಲ್ಲಿ 1 ಎಲ್ಲಿ ನೋಡಿದರೆ ಭಕ್ತಿ ॥ 1 11 ಅಲ್ಲಿ ಮತ್ತಿಲ್ಲ
ಜನರಿಗೆ ಪುಣ್ಯ 1 ಇಲ್ಲಿ ಲಭಿಸುವುದೆಲ್ಲವೂ ಪುಣ್ಯ 11 ಅಲ್ಲಿ

ಹೋದವರಿಗಿಲ್ಲಾಗಮನವು 1 ಇಲ್ಲಿ ಬಂದವರಿಗಿಲ್ಲ ಜನನ ।। 2 ।।
ಪೂಜೆಯು ವೈಕುಂಠದೊಳಗೆ 1 ಸರ್ವ ಜನರು ಮಾಡಬೇಕೆಂದಿಹ
ರು ।। ರಾಜೇಶ ಹಯಮುಖ ಕೃಷ್ಣ 1 ಮಧ್ವಾಚಾರ್ಯರರೊಬ್ಬರ
ಪೂಜೆಗೊಂಬ ।।

–81–

ರಾಗ ಕಮಾಜ – ಕವಕತಾಳ

ರಜತಪುರೀಶ ಪಾಲಿಸೊ 1 ನಿನ್ನ ಶ್ರೀಪಾದ
ಭಜನೆಯೊಳಗಿರಸೊ ।। ।। ಪ ।।

ಅಜಜನಕನ ಹರಿ 1 ನಿಜ ಜನರಿಗೆ ನೀ ।
ವಿಜಯದ ತವಪದ 1 ರಜದವನನಿಸೂ ।। ।। ಅ ಪ ।।

ಪಾರ್ಥನಖ ತ್ವಂಪಾಲಯ । ಉಡುಪಿ ನಿಲಯ 1
ಆರ್ತಜನ ಮನೋನಿಲಯ ।।
ಆರ್ತಸ್ವರದಿ ನಿನ್ನ 1 ಪ್ರಾರ್ಥನ ಮಂಗಳ 1
ಕೀರ್ತನಗೈಸಿ ದು 1 ವಾರ್ತೆಯ ಕಳೆವೆ
ಶೈಲಧರ । ಮುರನಹರ 1 ಮುರಳೀಧರ 1
ನೃಪಕೃತ ಕೃತುಕುವರ ।। ।। 1 ।।

ಹೃದಯಾಬ್ಜವಾನ ಈಶ । ಉದಯಾರ್ಕಭಾನ ।
ನಿಧನ ನಾಮಕ ಸರ್ವೇಶ ।।
ವಿಧಿ ಭವ ಮುಖನುತ । ಮುದಮುನನೀಯೂ ।।
ಶ್ರೀಹಂನ । ಯದುವಂಶ । ಖಲಧ್ವಂಸ
ಕೃತಕುರುಕುಲ ನಿರ್ವಂಶ ।। ।। 2 ।।

ಸರ್ವೇಶ ಸಲಿಲ ಲೋಲ । ಉರುತಮವ ಕುಡಿಪಬಾಲ 1
ಗುರುಗೋವಿಂದ ವಿಠಲ
ಹರಿನುತಲೆನ್ನಯ । ಉರುತರ ನಂಶಯ 1
ಪರಿಹರಿಸುತಪವ 1 ಕರುಣಾನಿಧಿ ಪೊರೆ ।।
ಗೋವಿಂದ 1 ಮುಕುಂದ 1 ನಿಜಾನಂದ 1
ಕೊಡು ಎನಗಾನಂದ ।। ।। 3 ।।

ರಾಗ ಆನಂದಭೈರವಿ ಮಿಶ್ರಛಾಪುತಾಳ

ರುಗ್ಮಭೂಷಣ ಪಾಲಿಸೆನ್ನನು ತಿಗ್ಮಕಿರಣ ಶತಪ್ರಭಾ ||
ರುಗ್ಮಿಣಿ ವದನಾಬ್ಜ ಷಟ್ಪದಯುಗ್ಮ ಉಡುಪಿಯ ಕೃಷ್ಣನೆ || ||ಪ||

(ದ್ವಾಪರದಲ್ಲಿ) ದ್ವಾರಕಾಪುರದಲ್ಲಿ ದೇವಕಿ ನರಬಾಲಲೀಲೆಯ
ತೋರುವದೆನುತಲಿ
ದದಿಯ ಮಥಿಸಲು (ತರಳ) ಬಾಲ್ಯದ ಕರುಣ ತೋರಿದೆ || ||1||

ತೊಡೆಯನೇರಿ ಸ್ತನ್ಯಪಾನವ ಮಾಡಿ ಮೋದಪಡಿಸುತಾಯಿಗೆ
ಕೊಡುತ ಕಡಗೋಲು ನೆಣ್ಣನಕಿತೆರಿ ಪ್ರಾಣ ಪ್ರೀಥ ನೀನಪಹರಿಸಿದೆ ||2||

ಮೊಸರು ಭಾಂಡವನೊಡೆದು ಜೆನ್ನೊಯು ನವನೀತ ಭಕ್ಷಿಸಿ
ಶೇಷಶಯನ ನೀನು ಕುಣಿಯಲು ಸಂತೋಷಪಟ್ಟಳು ದೇವಕಿ || ||3||

ದೂರದಿಂದಲೆ ಬಂದು ರುಕ್ಮಿಣಿ ಹರುಷದಿಂ ಶಿಶು ರೂಪವ
ತರಳರೂಪವ ನೀನು ಪುನರಪಿ ತೋರಲಾ ಸತಿ ನುಡಿದಳು || ||4||

ವಿಧಿತ ವೈಭವ ಈ ಪರಿಯಲಿ ಪ್ರತಿಮೆಯ ಮಾಡಿಸಿ
ಸತತ ಪೂಜೆಯ ಮಾಳ್ಪರೆ ಅತಿ ಪ್ರೀತಿಯಲಿ ಕೊಡಿನು ನೀ || ||5||

ರಮಣ ಈ ಪರಿ ಪೇಳೆ ವಿಶ್ವ ಕರ್ಮನಿಂದ ಮಾಡಿಸಿ
ಕಮಲನಾಭನು ಇತ್ತು ಅದರಲಿ ವಿಮಲ ಪೂಜೆಯಗೊಂಡನು || ||6||

ವೀರ ನಿನ್ನವತಾರ ಕಾರ್ಯವು ಪರಿಸಮಾಪ್ತಿ ಆಗಲು
ಸುರಪನಂದನ ತತ್ಪ್ರತಿಮೆಯ ಶರಧಿ ತೀರದಲ್ಲಿಟ್ಟನು || ||7||

ಸತತಪೂಜೆಯ ಮಾಳ್ಪರೆ ಅತಿ ಪ್ರೀತಿಯಿಂದಲಿ ಕೊಡು ಎನಗೆ
ವಿಧಿತ ವೈಭವವನ್ನೀ ಈ ಪರಿ ವೃದ್ಧಿಯನ್ನ ವಿರಚಿಸಿ || ||8||

ನಾವೆಯಲ್ಲಿ ಗೋಪಿಚಂದನ ಸಂಭೃತಾರ್ಚೆಯು ಬರುತಿರೆ
ನಾವೆ ನಡೆಯಲು ಮಧ್ವಮುನಿಪನು ದೂರದಿಂದಲಿ ಕಂಡನು || ||9||

ಅಮರರೊಡೆಯ ಶ್ರೀಮದುತ್ಪ್ರತಿ ತತ್ಪ್ರತಿಷ್ಠೆಯ ವಿರಚಿಸಿ
ಕುಮುದಬಂಧು ಒಂದು ಕ್ಷೇತ್ರದಿ ನಿನ್ನಮಿತ ಪೂಜೆಯ ಮಾಡಿದ || ||10||

ನನ್ನ ಹಿರಿಯರ ಪುಣ್ಯಲಭಿಸಲು ನಿಮ್ಮ ಪೂಜೆ ಮಾಡುತ
ಧನ್ಯನಾದೆನು ಮುಕ್ತಿ ಕರಗತ ಎನ್ನಗಾಯಿತು ಕೃಷ್ಣನ || ||11||

ಮಧ್ವಪೂಜಿತ ರಕ್ಷಿಸೆನ್ನನು ಸಾಧ್ಯನೋಜ್ಝಿತ ಸದ್ಗುಣ
ಸಾಧ್ವಲಂಕೃತ ವೇಷ ಮುಕ್ತಿಕವದಾಬ್ಜನೆ ಹಯವದನನೆ || ||12||

ರಾಗೆ : ಆನಂದಭೈರವಿ – ತ್ರಿವುಟತಾಳ

ರಂಗ ನಿನಗಾರೇನೆಂದರು ಮರೆತು ನಿದ್ರೆಗೈದೆಯಾ
ನೀ ಮಾಧವಸ್ವಾಮಿ ॥ ಪ ॥

ಬಿಕ್ಕಿ ಬಿಕ್ಕಿಯಳುತ ಬಂದ ಗೋಪಿಯು ಕಂದ
ಉಕ್ಕಿ ಹರಿವ ಕಣ್ಣನೀರ ತೊಡೆದಳೆಶೋದೆ
ಅಕ್ಕರೆಯಿಂದಲಿ ಮಗನ ಅತಿ ಮುದ್ದನಾಡಿ
ಮಕ್ಕಳ ಮಾಣಿಕ್ಯವೆ ನೀ ಮನೆಯೊಳಗಾಡೈ ॥ 1 ॥

ಹಳ್ಳಿಯ ಮಕ್ಕಳು ಎನ್ನ ಬೈದರಮ್ಮ
ಕಳ್ಳನೆಂದು ಎನ್ನಕೂಡೆ ಆಡಲೊಲ್ಲರು
ಮೆಲ್ಲನೆ ಬೈಯುತ್ತ ಬರಲು ಕಲ್ಲಲಿಟ್ಟರಮ್ಮಯ್ಯ
ಅಲ್ಲಿಂದಂಜಿ ಅಳುತ ನಾನು ಓಡುತ ಬಂದೆ ॥ 2 ॥

ಬಾಗಿಲ ಗೊಲ್ಲರು ಗೋವಗೋಪಿಯರೆಲ್ಲ
ಹಗಲುಗಳ್ಳ ಹಾಲು ಬೆಣ್ಣೆ ಚೋರನೆಂದರು
ಮಗುವೆಂದೆನಿಸಿಕೊಂಡು ಮನೆಯೊಳಗಾಡೈ
ಹೋಗುನ್ನಂತ ಉಡುಪಿಯಲ್ಲಿ ಮುದ್ದು ಹಯವದನರಾಯ ॥ 3 ॥

-84-

ರಾಗ . ಶ್ರೀರಾಗ – ತ್ರಿವುಟತಾಳ

ರಂಗ ಬಂದ ಬೃಂದಾವನವಲಿ ನಿಂದ । ಕೊಳಲ ಧ್ವನಿ
ಬಹುಚೆಂದ ॥ ಪ ॥ ನಂದ ಗೋಪಿಯರ ಕಂದ ಮುಕುಂದ । ಸುಂದರಿ
ಯರ ಆನಂದ ಗೋವಿಂದ ॥ ಅ.ಪ ॥
ಮಂದಗಮನೇರ ಕೂಡಿ ಸರಸವನಾಡುತ । ಇಂ
ದಿರೆಯರಸ ನಗುತ ಕೊಳಲನೂದುತ ॥ ಎಂದೆಂದಿಗೂ ತನ್ನ ನಂಬಿ
ದ ಭಕ್ತರ । ಬಂದು ಪೊರೆವ ಗೋವಿಂದ ಮುಕುಂದ ॥ 1 ॥
ಉದಧಿ ಸಂಚಾರ ಗುಣಗಂಭೀರ ನವನೀತ । ದಧಿ
ಭಾಂಡಚೋರ ರುಕ್ಮಿಣಿಮನೋಹರ ॥ ಮದನಗೋಪಾಲನು

ಭಜಿಸುವ ಭಕ್ತರ । ಹೃದಯದೊಳಗೆ ನಿಂದು ಮುದವನುಕೊಡುವ ll 2 ll

ಮಧುರೆಯಿಂದಲಿ ಬಂದ ಮಾವನ್ನ ಕೊಂದ । ಕಡ
ಗೋಲ ನೇಣ ಕೈಲಿ ಪಿಡಿದ ದ್ವಾರಕಾವಾಸ ll ಹಡಗಿನಿಂದಲಿ ಬಂದ
ಉಡುಪಿಲಿ ನೆಲೆಸುತ । ಬಿಡದೆ ಪೂಜೆಗೊಂಬ ಒಡೆಯಶ್ರೀಕೃಷ್ಣ ll 3 ll

–85–

ರಾಗ ಪಂತುವರಾಳಿ – ಮಟ್ಟತಾಳ

ಲೋಕಭರಿತನೋ । ಕೃಷ್ಣಾ – l
ನೇಕ ಚರಿತನೊ ll ll ಪ ll

ಕಾಕುಜನರ ತರಿದು ತನ್ನ l
ಏಕಾಂತ ಭಕ್ತರ ಪೊರೆವಕೃಷ್ಣ ll ll ಅ.ಪ ll

ಮಿಕ್ಕನೃಪರ ಜರಿದು ಅಮಿತ l
ವಿಕ್ರಮ ಯದುವರವರನೆ ತೆಸಗ ll
ತಕ್ಕರಮಣನೆಂದು ರುಕ್ಮಿಣಿ l
ಉಕ್ಕಿಮಾಲೆಯಿಕ್ಕಿದಳಾಗ ll ll 1 ll

ರಾಜಸೂಯಯಾಗದಲ್ಲಿ l
ರಾಜರಾಜರಿರಲು ಧರ್ಮ – ll
ರಾಜಸುತನು ಇವನೆ ಸಭಾ l
ಪೂಜೆಗರ್ಹನೆಂದು ಮನ್ನಿಸಿದನಾಗ ll ll 2 ll

ಜ್ಞಾನಶೂನ್ಯನಾಗಿ ಸೊಕ್ಕಿ l
ತಾನೆ ವಾಸುದೇವನೆನಲು ll
ಹೀನ ಪೌಂಡ್ರಕನ ಶಿರವ l
ಜಾಣರಾಯ ತರಿದನಾಗ ll ll 3 ll

ಉತ್ತರೆಯ ಗರ್ಭದಲ್ಲಿ l
ಸುತ್ತಸುಳಿದ ಅಸ್ತ್ರವನ್ನು ll
ಒತ್ತಿ ಚಕ್ರದಿಂದ ನಿಜ l
ಭಕ್ತ ಪರೀಕ್ಷಿತನ ಕಾಯ್ದ ll 4 ll

ತನ್ನ ದಾಸಜನರಿಗೊಲಿದು ।
ಉನ್ನತ ಉಡುಪಿಯಲ್ಲಿ ನಿಂದು ॥
ಘನ್ನ ಮಂದಿರದೊಳಗಿಹ ಪ್ರ – ।
ಸನ್ನ ಹಯವದನಕೃಷ್ಣ ॥ 5 ॥

## –86–

ರಾಗ ಕಲ್ಯಾಣಿ – ಆದಿತಾಳ

ಶ್ರೀ ಕಮಲನೇತುರ ಪುಣ್ಯಗಾತುರ
ಸಾಕಾರ ಕ್ಷಣಮಾತುರ ನೀ ಕರುಣದಿಂದ
ವಾಕುಲಾಲಿಸಬೇಕು ವೇಗದಲಿ
ಗೋಕುಲಾಂಬುಧಿ ರಾಕಾಂಬುಜ ಲಾ
ವಕರ ತೊಲಗಿಸಿ ನಾಕುಪವನ್ನು ನೀಕರುಣಿಸು ॥ ॥ ಪ ॥

ದೇವಕೀಗರ್ಭ ಸಂಭೂತ ನಿತ್ಯ ಅಜಾತಾ
ಪಾವನ ಬಲುಚರಿತ ಕೋವಿದವರರತ ಶತಕುಂಭಮುಕುಟನೀತಾ
ಪಾಪ ಮರ್ದನ ನಿರ್ಭೀತಾ
ದೇವತಿಮಿರರ ಕಾಮಸಕ್ತರ ಜೀವನ ವರವೀವನನುದಿನ
ಆವು ಕಾವುತ ಪೋಗಿ ಗೋವಳರೊಡಗೂಡಿ
ಪಾವಿನ ಪಾಡತುಳಿದಾ ವಿಷವಿಳಿಸಿದಾ
ಶ್ರೀವಲ್ಲಭ ನಿನಗಾಪಾವಾನೆಣೆ ತ್ರಿಭುವನದೊಳಗತಿ
ಸೇವಕ ಜನರಿಗೆ ಕೈವಲ್ಯವನು ಕೊಡುವಾ ॥ ॥ 1 ॥

ಪೂತನಿ ಪ್ರಾಣಾಪಹಾರ ಪರಮಸುಂದರ
ಜ್ಯೋತಿರ್ಮಯ ಶರೀರ ಮಾತಾಬಂಧ ಪರಿಹಾರಪಾವಣಜಠರ
ಬೂತಿ ಉಳ್ಳಿಂದ್ರ ಕುಮಾರ ಸೂತ ವಿದೂರ ನೀನಾಗಿ
ಭೂತಳದೊಳು ಪಾತಕ ಕುರುವ್ರಾತ ಯಮುನೆಯು
ಭ್ರಾತನ್ನ ನಗರಿಯ ಯಾತನಗಟ್ಟಿದೆ
ಪ್ರೀತುರ ನಿನ್ನ ಪಾಯಾತನಕೇಸಂಬೆ
ಖ್ಯಾತಿ ಪುರುತಿ ಬನ್ನಿತು ಕಾಯೂ ಪಾರಿಜಾತವ ತಂದ
ಖಿತ ಮಹಿಮ ಜಗತ್ತಾತಾ ಬೊಮ್ಮಾದಿವಿನುತ ॥ ॥ 2 ॥

ಈ ಪಡುವಲಾಬ್ಧಿವಾಸ ಇಲವಾರ ತೋಷ ಗೋಪಾಲ ಮಾನಿಸವೇಷ

ಆಪಾರರತುನ ಭೂಷಾನಂತೆ ಸ್ವಪ್ರಕಾಶ ತಾಪಃಗಳ ವಿಲಾಸ
ಕೋಪ ಮೊದಲಾದ ತಾಪತ್ರಯಗಳ ನೀ ಪೋಗಾಡು ಉ
ಡುಪಿ ಸದನನೆ ಪಾಪರಹಿತ ಮಧ್ವಪತಿ ಕರದಿಂದ ಪೂಜೆಗೊಂಡ
ಪ್ರತಾಪನೆ ಜ್ಞಾನದ ದೀಪದ ಬೆಳಗಿಲಿ
ಗೋಪ ವಿಜಯವಿಠ್ಠಲ ಪರಮಾ ನಿನ್ನ ರೂಪವ ತೋರಿಸು ॥ 3 ॥

## –87–

ರಾಗ ಬಾಗೇಶ್ರಿ - ಝಂಪೆತಾಳ

ಸಕಲ ಕಾಲದಿ ಮಾಡಿದ ಕರ್ಮವು ।
ಭಕುತಿಯಿಂದಲಿ ಬಂದರ್ಪಿತವೆನ್ನಿ ಉಡುಪಿಯ ॥ ಪ ॥

ಯಾತ್ರೆಗಳ ಮಾಡಲಿ ತೀರ್ಥಗಳ ಮೀಯಲಿ
ಸ್ತೋತ್ರಗಳ ಮಾಡಲಿ ಕೊಂಡಾಡಲಿ ॥
ನೇತ್ರದಲಿ ನೋಡಿ ಕರಮುಗಿದು ನಮಸ್ಕರಿಸಲಿ ।
ಹೋತ್ರವನು ಮಾಡಿ ಹಿತವಾಗಿ ನುಡಿಯಲಿ ॥ ೧ ॥

ದಾನವನು ಮಾಡಲಿ ದಾಕ್ಷಿಣ್ಯವಾಗಲಿ ।
ಮೌನವನು ಮಾಡಲಿ ಮಾತಾಡಲಿ ॥
ಕಾನನವ ಸೇರಲಿ ಕಂಡಲ್ಲಿ ತಿರುಗಲಿ ।
ಏನೇನು ಚರಿತೆಗಳ ಮಾಡುತಿರಲಿ ॥ ೨ ॥

ಪುಣ್ಯವಾದರು ಲೇಸೆ ಪಾಪವಾದರು ಹರಿ ।
ಮನ್ನಿಸಿ ತಾನೀಗ ತೆಗೆದುಕೊಂಡು ॥
ತನ್ನ ಸಮೀಪದಿ ಇಟ್ಟುಕೊಂಡು ಅವನ ।
ಘನ್ನ ಮೂರುತಿ ವಿಜಯವಿಠ್ಠಲ ಪೊರೆವ ॥ ೩ ॥

## –88–

ರಾಗ . ಕಾಂಬೋಧಿ – ಝಂಪೆತಾಳ

ಶ್ರೀವದನ ಕುಮುದ ಚಂದ್ರಮ ಚಿದಾನಂದಮಯ
ಸೇವಕಪ್ರಿಯ ಕೃಷ್ಣ ॥ ॥ ಪ ॥

ದೇವಕೀನಂದನ ಸನಾತನ ಪರಬ್ರಹ್ಮ ।
ದೇವಾಧಿದೇವ ಶ್ರೀಕೃಷ್ಣ ॥ ಅ ಪ ॥

ಗೋಕುಲಾರಾಧ್ಯ ಗೋವಿಂದ ನಿತ್ಯಾತ್ಮಪರ ।
ಗೋಕುಲ ಸುಗಂಭೀರ ಕೃಷ್ಣ ॥
ಗೋಕುಲಾವೃಂದಿತರ ಬಾಲ ಭಾಸ್ಕರಕೋಟಿ ।
ಗೋಕುಲಮಯಾನಂತ ಕೃಷ್ಣ ॥ 1 ॥

ಹಂಸವಾಹನ ಜನಕ ಗೌರೀಶನುತ ಪರಮ
ಹಂಸ ನಿರ್ದೋಷ ಶ್ರೀಕೃಷ್ಣ ॥
ಹಂಸ ಸಂಕುಲ ಮನೋಧ್ಯಾನಗಮ್ಯ ಮುಕುಂದ ।
ಹಂಸಲೋಚನ ರಾಮಕೃಷ್ಣ ॥ 2 ॥

ನಾಗೇಂದ್ರಶಯನ ದಾಮೋದರ ಹೃಷೀಕೇಶ ।
ನಾಗೇಂದ್ರ ವರದ ಶ್ರೀಕೃಷ್ಣ ॥
ನಾಗಾರಿವಾಹನ ನಿರಾಲಸ್ಯ ವಿಷ್ಣುಧೃತ ।
ನಾಗಾರಿಪದ್ಮ ಶ್ರೀಕೃಷ್ಣ ॥ 3 ॥

ಗಾಂಗೇಯಾಚೇಲ ಭೂಷಿತ ಜಗಚ್ಚರಿತ ಜಿತ ।
ಗಾಂಗೇಯಮಿತ್ರ ಶ್ರೀಕೃಷ್ಣ ॥
ಗಾಂಗೇಯನುತಿಪಾತ್ರ ಪರಮಪಾವನಗಾತ್ರ ।
ಗಾಂಗೇಯನಾಥ ಶ್ರೀಕೃಷ್ಣ ॥ 4 ॥

ಉಡುಪಿಪುರವಾಸ ಸಜ್ಜನವೇಷೋಷ ಪರಮೇಶ ।
ಉಡುರಾಜವರದ ಶ್ರೀಕೃಷ್ಣ ॥
ಜಡಜಮಾರ್ಗಣಕೋಟಿ ಲಾವಣ್ಯ ಮಧ್ವಪತಿ ।
ಕಡೆಗೋಲು ಪಿಡಿದ ಶ್ರೀಕೃಷ್ಣ ॥ 5 ॥

## –೩೯–

ರಾಗ . ಧೈರವಿ – ತ್ರಿಪುಟತಾಳ

ಸಿಕ್ಕಿದನೆಲೆ ಜಾಣೆ ಶ್ರೀ ವೇಣುಗೋಪಾಲ । ಭಕ್ತ
ವತ್ಸಲದೇವನ ॥ ಪ ॥ ಮಕ್ಕಳ ಚೆಂಡಿಕೆ ಮರದ ಕೊನೆಗೆ
ಕಟ್ಟಿ ಛಕ್ಕನೆ ಕೈ ಚಪ್ಪಾಳಿಕ್ಕಿ ನಗುವ ರಂಗ ॥ ಅ.ಪ ॥

ಹೆಣ್ಣುಮಕ್ಕಳು ಬಚ್ಚಲೆಣ್ಣೆ ಮಂಡೆಯೊಳು । ಬಣ್ಣವಸ್ತ್ರವ
ಬಿಟ್ಟು ಬರಿಮೈಯೊಳಿರಲು ।। ಬೆನ್ನಿಗೆ ಬಿಸಿನೀರು ಚೆಲ್ಲಿ ಸೀರೆ
ಗಳೊಯ್ದು ಉನ್ನತವಾದ ವೃಕ್ಷವೇರಿ ಕಾಡುವನಮ್ಮ ॥ 1 ॥
ಪುಟ್ಟಮಂಚದ ಮೇಲೆ ಪತಿಯಂತೆ ಮಲಗಿಪ ।
ಎಷ್ಟು ಸ್ವಾತಂತ್ರ್ಯವೆ ಎಷ್ಟು ಪೇಳುವನೆ ।। ಉಟ್ಟ ಸೀರೆಯ
ನೆಳೆದು ಬಟ್ಟ ಕುಚದೊಳು ಗುರಿ – । ನೆಟ್ಟು ಓಡಿದ
ಪರಿ ಎಷ್ಟೆಂತ ಪೇಳಲೆ ? ॥ 2 ॥
ನಡಗರದೊಳು ಸೂಳನಾಸಿರ ಗೋಪೇರ । ಒಡಗೂಡಿ
ಕೊಳಲನು ಪಿಡಿದು ತಾ ಪೂಸರ ।। ಕಡೆವೊ ಗೊಲ್ಲತಿಯರ
ಕೈ ಪಿಡಿದಾಡುವ । ಒಡೆಯನೆ ಇವನಮ್ಮ ಉಡುಪಿಯ
ಶ್ರೀಕೃಷ್ಣ ।। 3 ।।

## –90–

ರಾಗ , ಕಾಂಬೋದಿ – ಝಂಪೆತಾಳ

ಸಂಪತ್ತು ನಿನಗಿಂದು ಪೊಸದಾಯಿತೆ
ಸೊಂಪಿನಲಿ ಪಾಲು ಕುಡಿದದು ಮರೆತೆಯಾ ರಂಗ ॥ ಪ ॥

ಪಾಲು ಮೊಸರು ಕದ್ದು ಗೋವಳರೆಂಜಲನುಂಡು
ತಾಳ ಫಲಗಳ ಮೆದ್ದುದು ಮರೆತೆಯಾ
ಕಾಲಕಾಲಕೆ ಇಲ್ಲಿ ಷಡುರಸಾಯನ ಸವಿದು
ಮೇಲಾಗಿ ಪೊಟ್ಟೆಯ ಪೊರೆವ ಅತಿಶಯವೇನು ॥ ।। 1 ।।

ಕಂಡವರ ಕೈಯ್ಯ ಪಳ್ಳಿಯಲಿ ಹಳಹಳ ಎನಿಸಿ
ಕೊಂಡು ಭಂಡಾಗಿ ಇದ್ದದ್ದು ಮರೆತೆಯಾ
ತಂಡ ತಂಡದಲಿಪ್ಪ ವೈಭೋಗ ವಾಹನ
ತೋಂಡರು ಕರ ಮುಗಿದು ಕೊಂಡಾಡುವ ಭರವೊ ।। 2 ।।

ಮತಿಹೀನ ಖಳಗಂಜಿ ವನಧಿಯೊಳಗೆ ದ್ವಾರ
ವತಿಯಲ್ಲಿ ವಾಸವಾದುದು ಮರೆತೆಯಾ
ಪ್ರತಿದಿವಸದಲ್ಲಿ ಸದ್ಭಕ್ತಿಯುಳ್ಳ ಶುದ್ಧ
ಯತಿಗಳಿಂದ ಪೂಜೆ ಕೈಕೊಂಬ ಸಂಭ್ರಮವೊ ।। ॥ 3 ॥

ಈ ವೈವಸ್ವತ ಮನ್ವಂತರ ಉಳ್ಳನಕಾ
ಈ ವಿಧದ ಕರ್ಮ ತೆಪ್ಪಲರಿಯದು
ಕೋವಿದರು ಪೇಳುವುದು ಪುಸಿ ಎನ್ನದಿರು ದೇವ
ಈ ಉಡುಪಿಯ ಸ್ಥಾನ ನೆಚ್ಚರೇನೂ ನಿನಗೆ ॥ ॥ 4 ॥

ಭಕುತೆಗೆ ಬಂದ ಮಹಾಕ್ಲೇಶ ಕಳೆಯದಿರಲು
ಭಕುತವತ್ಸಲನೆಂಬ ಬಿರುದು ಬರಿದೇ
ಮುಕುತೀಶ ಶಿರಿಕೃಷ್ಣ ವಿಜಯವಿಠ್ಠಲ ವಿ
ರಕುತಿಯ ಇತ್ತರೆ ಕೀರ್ತಿ ಬಾಹುದು ನಿನಗೆ ॥ ॥ 5 ॥

–91–

ರಾಗ . ಆನಂದಭೈರವಿ – ಝಂಪೆತಾಳ

ಹುಡಿಯಾ ಹೊರಳೇನು ಬಡಕೊಂಡರೇನು ।
ಕಡಲಶಯನನೊಳು ದೃಢ ಭಕ್ತಿ ಇರದೆ ॥ ಪ ॥

ಐದು ಪಾವಕನೊಳು ಮೈಕೆಡಹಿದರೇನು ।
ವೈದುಶ್ವಾನ ನೆತ್ತಿಲಿಟ್ಟರೇನು ॥
ಬೈದು ಅಡವಿಲ ತುದಿಕಾಲ್ಮೇಲೆ ನಿಂತರೇನು ।
ಮೈದುನರ್ಜುನ ಸಖನ ಪಾದ ಪೂಜಿಸದನಕ ॥ 1 ॥

ತೊಪ್ಪಲ ಮೆದ್ದಘ ತಪ್ಪಲಾಗಿಸಲೇನು ।
ಉಪವಾಸದಿ ಅನಿಲ ನುಂಗಲೇನು ॥
ತಪ್ಪದೆ ಇಳೆಯ ಸುತ್ತಾಡಿ ದಣಿದರೇನು ಕಂ – ।
ದರ್ಪನಯ್ಯನ ಒಲವಿಲ್ಲದನಕಾ ॥ 2 ॥

ಮಧ್ವ ಸರೋವರದಿ ಮಿಾಯದ ಜನುಮೇನು ।
ಮುದ್ದುಕೃಷ್ಣನ್ನ ನೋಡದ ಅಕ್ಷಿಯೇನು ॥
ಮಧ್ವೇಶಪ್ರಸನ್ನ ವೆಂಕಟೇಶನೊಪ್ಪಿರದವನು ।
ಇದ್ದೇನು ಇಲ್ಲದೇನೀಧರೆಗೆ ॥ 3 ॥

-92-

ರಾಗ . ಭೈರವಿ - ಅಟ್ಟತಾಳ

ಹೃದ್ಯಬಾರೊ ಅನ 1 ಪದ್ಯ ಬಾರೊ ॥ ಪ ॥
ಮಧ್ವಮುನಿ ಕರಕಮಲ ಪೂಜಿತ ಪಾದಪದ್ಮ ಬಾರೊ ॥ ಅ.ಪ ॥

ಅಬ್ಧಿಜೆಯೊಡನೆ ಸಂತತ ಸುಖಿಸುವ ಸುಖವಾರ್ಧಿ ಬಾರೊ 1
ಹದ್ದಿನ ಹಗೆಯುವನಲ್ಲಿ ಮಲಗಿಪ್ಪ ಪಸಿದ್ಧ ಬಾರೊ 11
ಉದ್ಧತ ದಿತಿಸುತ ಪುಂಜವ ಕೊಲ್ಲುವ ಸನ್ನದ್ಧ ಬಾರೊ 1
ಬದ್ಧರನೆಲ್ಲರನುದ್ಧರಿಸುವ ಸುಪ್ರಸಿದ್ಧ ಬಾರೊ ॥ 1 ॥

ಪೂತನಿ ಮೊದಲಾದವರ ಕೊಲ್ಲುವೆನೆಂದು ಜಾತ ಬಾರೊ ।
ಕಾತರಿಸುವ ಕಂಜಮುಖಿಯರ ಕಾಮಿತದಾತ ಬಾರೊ ॥
ಮಾತುಳನೆನಿಪ ಕಂಸನ ಮರ್ದಿಸಿದ ಶ್ರುತಿಗೀತ ಬಾರೊ 1
ಪ್ರೀತಿಯಿಂದಂಬುಧಿಯೊಳು ಪುರವ ರಚಿಸಿದ ವಿಖ್ಯಾತಬಾರೊ ॥ 2 ॥

ಮೇದಿನಿಯೊಳಗುಡುಪಿಯೊಳಿಪ್ಪ ಭೂಭಾರ ಭೇದಿ ಬಾರೊ ।
ಕಾದಿಸಿ ಖಳರನುಪಾಯದಿ ಗೆಲುವ ವಿನೋದಿ ಬಾರೊ ॥
ಸಾಧಿಸುವವರಿಗೆ ಗೋಚರಿಸುವ ವಿಶ್ವವೇದಿ ಬಾರೊ 1
ವಾದಿರಾಜ ಯತಿಯ ಮನಮಂದಿರಕ್ಕೆ ಜಗದಾದಿ ಬಾರೊ ॥ 3 ॥



# ಅನುಬಂಧ - 5

–1–

ರಾಗ · ಕಾಂಬೋಧಿ – ಝಂಪೆತಾಳ

ಮಧ್ವ ಸರೋವರದಿ ಸ್ನಾನ ಮಾಡಿರೋ । ಬುದ್ಧಿವಂತರು ಕೇಳಿ ಇದರ ಮಹಾತ್ಮೆಯನೂ ॥ ಪ ॥ ಕೃತವೋಳಗಿವೆ ಆನಂದ ಸರೋವರಾ । ತೇತ್ರಾಯುಗದಲಿ ವರುಣತೀರ್ಥವೂ । ವಿತದ್ವಾಪರದಿ ಚಂದ್ರಪುಷ್ಕರಿಣಿಯೆನಿಸೀಗ । ಕ್ಷಿತಿಯೊಳಗೆ ಮಹತೀರ್ಥವು ಮಧ್ವಸರೋವರವೂ ॥ 1 ॥ ಸುರನದಿ ವಿಕ್ಕಾದ ಸ್ಪಾಧಸದಲಿ ಸೇರಿ ವಿ । ಸ್ತಾರವಾಗಿ ಕೊಡುತಿಪ್ಪಳು । ವಕ್ಷದೀ ಧರಯೊಳಗೆಯಿಲ್ಲಿ ಗುರು ಮಧ್ವಮುನಿ ಸೇವಾರ್ಥ ನಿರುತದಲಿ ತ್ರೀವ್ರಗತಿ ಕೊಳುತಿಪ್ಪಳೂ ॥ 1 ॥ ಸಕಲವೇದ ಶಾಸ್ತ್ರ ಓದಿದವನಾವರೂ । ಮತಿವಂತನಾಗಿ ವಿದ್ವಾಂಸನಾಗೇ । ಸುಖತೀರ್ಥ ಸರೋವರದಿ ಸ್ನಾನ ಮಾಡದೆ ಇರಲು ವಿಕಲ ಮತಿಯಿಂದ ಮಹನರಕ ಭುಂಜಿಸುವಾ ॥ 3 ॥ ಒಂದ ಮಜ್ಜನ ಮಾಡೆ ಅನಂತಜನ್ಮಕ್ಕೆ । ತಂದುಕೊಡುವುದು ನರಗೆ ಇಂಥ ಫಲವಾ । ಎಂದೆಂದಿಗೆ ಬಿಡದೆ ಪಾನವಾದಾ । ಮಂದಿಗಳ ಪುಣ್ಯಪ್ರಭಾವ ಎಣಿಸುವರುಂಟೇ ॥ 4 ॥ ಆದಿಯಲಿ ಇದ್ದ ಲಿಂಗ ಶರೀರವಾ । ಛೇದಿಸುವ ವಿರಜಾನದೀಸ್ನಾನವೆನ್ನೀ । ಮೋದವಮೂರುತಿ ಸಮ್ಮ ವಿಜಯ ವಿಠಲ ಕೃಷ್ಣ ಭೇಧಾರ್ಥ ಮತಿಕೊಟ್ಟು ಖೇದವನು ತೊಲಗಿಸುವಾ ॥ 5 ॥

–2–

ರಾಗ ಬಿಲಹರಿ - ಧ್ರುವತಾಳ

ಆದಿ ಮೂರುತಿ ಪರಶುರಾಮನು ಸರ್ದ –
ಮೇದಿನಿ ಸುರರಿಗೆ ಧಾರಿಯುರೆವು ।
ಮುದದಿಂದಲಿ ಸಿಂಹಾಚಲದಲ್ಲಿ ಪಾನವಾಗಿ ।

ಕೈಮು ನೆಳೆದು ವಾರಿನಿಧಿಯಿಂದಲಿ ।
ಮೇದಿನಿಬಿಡಿಸಿದ ಪ್ರತಾಪವನ್ನ ತೋರಿ ।
ವೇದ ಪಾಲಕ ಮೆರದ ಸ್ತುತಿಗಳಿಂದ ।
ಈ ಧರಿಗೆ ರಾಮಭೋಜಸಂಪೊ ಜೀವನ ।
ಆದರದಿಂದಲಿ ಇರಬೇಕೆಲು ।
ಮೇಧರಚಿಸಿ ಭಾರ್ಗವನ ಸತ್ಕರುಣ ಸಂ–
ಪಾದಿಸುವೆನೆಂದು ಧಾರುಣಿಯು ।
ಶೋಧಿಸೆ ಅದರೊಳು ಒಂದಹಿ ನಾಗಿಲಿಗೆ ।
ಭೇದವಾಗಿ ಬರಲು ಸಡಾಗಿ ನೃಪತಿ ।
ಏದಯಾಂಬುಧಿ ಎನ್ನವರಾಧ ಕ್ಷಮಿಸೆಂದು ।
ಪಾದಕ್ಕೆ ನಮಿಸಿ ಬಿನ್ನೈಸಿ ।
ನಾಥುಜೀವನು ರಾಮಗೆ ಪೂರೆಯಿಡಲು ವಿ ।
ನೋದದಿಂದಲಿ ಬಂದು ತಿಳುಹಿದನು
ನಾಥನ ನಿನಗಿದೆ ಪಾಪ ಪುತ್ತಿಲ್ಲವೆಂದು ।
ಕ್ರೋಧವನುಜಭಂಗ ವಿಜಯವಿಠ್ಠಲ ಪ್ರ–
ಬೋಧ ಶರೀರ ಕ್ಷೇತ್ರಪರ್ಗಸಂಹಾರ । ॥ 1 ॥

ಮಠ್ಯತಾಳ

ಅರಸುರಾಮಭೋಜ ದ್ವಾರದಸಭೆಯಲ್ಲಿ ।
ವರಶುಧರಗೆ ಒಂದು ಹರಿಮಣಿಕೆತ್ತಿಸಿದ ।
ವರಮರಜತವಿಷ್ಟರವನ್ನು ನೇಮಿಸಿ ।
ಹರುಷದಿಂದಲಿ ಸ್ತೋತರ ಮಾಡುತ್ತಲಿ ಯಾಗ–
ವಿರಚಿಸಿ ನಿತ್ಯ ಭೂಸುರರ ಸುಖಪಡಿಸಿ ।
ಮರಳೆ ಸಿಂಹನಾಮಗಿರಿಯಲ್ಲಿ ಜನಿಸಿ ।
ಮೆರೆವ ನೂ-ವರ್ಷ ಚರಿತೆಯಲ್ಲಿ ಮಿಂದು
ಪರಿ ಪರಿ ಬಗೆಯಿಂದ ಇರುತಿರೆ ಇತ್ತಲು ।
ಧರೆಯೊಳಗಿದುವೆನರು ರಜತಪೀಠಪುರವೆಂದೆನಿಸಿತು ।
ಸರಿಯಿಲ್ಲ ಇದಕೆ ಕರಿಸಿತು ಭಾರ್ಗವನ ।
ಕರುಣದಿಂದಲಿ ಇಲ್ಲಿ ಸರಸಿಜ ಸಂಭವ ।
ಪುರಹರಸುರನಿಕರಸೆರೆದು ಪೂಜಿಸುವರು
ನಿರುತದಲ್ಲಿ ಬಿಡದೆ ಕರುಣಾಕರ ಸಿರಿವಿಜಯ ವಿಠಲನ್ನ ।
ಚರಣವ ನನೆದಾ ದಾಸರಿಗೆ ಬಲು ಸುಲಭ ॥ ॥ 2 ॥

## ತ್ರಿಪುಟತಾಳ

ಒಂದು ಕ್ರೋಶಉದ್ದ ಅದರಷ್ಟು ಅಗಲ ಆ-
ನಂದವಾಗಿಪ್ಪ ಒಪ್ಪುವ ಗದ್ದುಗೆ ।
ಕುಂದದೆ ತನ್ನಿಂದ ತಾನ ಇಳದು ವ-
ಸುಂಧರದೊಳಡಗಿತು ಸೋಜಿಗ ।
ಪೊಂದಿತು ಲೋಕವು ಇತ್ತರಾಮಭೋಜ ।
ಒಂದು ಕನಕಶೇಷಾಸನ ಮಾಡಿಸಿ ।
ತಂದು ಇಡಿಸಿ ಧ್ಯಾನ ಮಾಡಿದ ಭಾರ್ಗವ ।
ಬಂದಿದರಮಧ್ಯ ನಿಲಬೇಕೆಂದು ।
ಅಂದಮಾತಿಗೆ ಮೆಚ್ಚಿ ಪರಶುರಾಮನು ಲಿಂಗ-
ದಂದದಿ ನೆಲಸಿದ ಅಹಿಸದನ ।
ಅಂದಾರಭ್ಯವಾಗಿ ಇದೆ ಅನಂತಾಸನ ।
ಎಂದೆನಿಸಿನು ಈತ ಹರಿಕಾಣಿರೋ ।
ನಂದಿವಾಹನನಂತೆ ತೋರಿದ ಬಲುಹೀನ ।
ಮಂದಜನಕೆ ತಮವಾಗಲೆಂದು ।
ಸಂದೇಹ ಬಡಸಲ್ಲ ಸುಜನರು ಈತನೆ ।
ಇಂದಿರಾಪತಿಯುಂದು ವಂದಿಸಿರೋ ।
ಮಂದಹಾಸವದನ ವಿಜಯವಿಠ್ಠಲನಿಪ್ಪ ।
ಇಂದುಕ್ಷೇತ್ರವಿದು ವಿವರಿಸಿ ತಿಳಿವದು ॥ ॥ 3 ॥

## ಆಟತಾಳ

ಜಲಜಸಂಭವಪುತ್ರ ದಕ್ಷನು ಶಪಿಸಲು ।
ಕಳೆಗುಂದಿ ಚಂದ್ರಮ ತಿಳಿದು ಭಾರ್ಗವಕ್ಷೇತ್ರ- ।
ದೊಳಗೆ ಇದೇವೆಗ್ಗಳಿಯು ಸ್ಥಳವಂದು ।
ಕುಳಿತಜಾರಣ್ಯ ಮಧ್ಯದಲ್ಲಿ ತಪಮಾಡಿ ।
ಒಲಿಸಿ ತನ್ನನು ಧರಿಸಿದ ದೇವನಪಾದ ।
ಜಲಜವ ಕಂಡು ಶಾಪವನ್ನು ಪೋಗಾಡಿ ।
ಕಳೆವೇರಿದನು ದಿನಪ್ರತಿಯಲ್ಲಿ ಪೊಳೆವುತ್ತ ।
ಪುಲಿದೊಗಲಾಂಬರಸರ ಅನಂತಾಸನ್ನ ।
ಬಳಿಯಲಿನಿಂದನು ಸಮ್ಮೊಗವಾಗಿ ನಿ-
ಶ್ಚಲ ವರನೀವುತ ಬಂದ ಭಕ್ತರನ್ನ ।

ನಲಹುತ್ತ ಚಂದ್ರಮೌಳೀಶ್ವರನೆಂದೆಂಬ ।
ಸಲೆ ಪೆಸರಿನಲ್ಲಿ ಮೆರೆವುತಲಿಪ್ಪದು
ಕಲಿಯುಗದಲಿ ಬಂದ ಕೃಷ್ಣ ವಿಜಯ ವಿ-
ರಲ ನಾನಾ ಮಂಗಳ ನೆಸೆವುತ್ತ ನಲಿವುತ್ತ ॥ ॥ 4 ॥

**ಆದಿತಾಳ**

ಪರಶುರಾಮನು ತನ್ನ ಸಿರಿಯುಕೂಡವಿಮಾನ ।
ಗಿರಿಯಲ್ಲಿ ನಿಂದನು ಸುರರಿಂದರ್ಚನೆಕೊಳ್ಳುತ್ತ ।
ಅರಸುತಾನಾಗಿ ನಿರಂತರದಲ್ಲಿ ಪೊಪ್ಪುತಿಪ್ಪ ।
ಪರಮಪುರುಷನೀತ ನರನೆಂದು ಪೇಳಸಲ್ಲ ।
ಪರಮಶುದ್ಧನಾಗಿ ನರನು ಬಂದು ಈ ಕ್ಷೇ-
ತುರದಲ್ಲಿ ಇದ್ದಮಹಿಮೆ ಅರಿದು ಆತುರದಿಂದ ।
ಪುರುಷಗದಾಚಾಪಶರ ಬೊಮ್ಮ ಚಂದ್ರ ಶಂ-
ಕರ ವಶಿಷ್ಠ ಸುದರುಶನ ಶಂಖ ಪದುಮ ।
ಪರಿ ಪರಿ ತೀರ್ಥಂಗಳು ಚರಿಸಿ ಜ್ಞಾನದಲಿ ಮಿಂದರೆ ।
ಹರಿದು ಪಾಪಗಳು ಪರಿ ಹರಿ ಪೋಗುವವು ।
ಭರತಖಂಡದೊಳು ಸರಿಯಿಲ್ಲ ಇದಕೆಲ್ಲಿ ।
ಸ್ಮರಣೆಮಾತ್ರದಲಿ ಸಂಚರಿಸುವ ಮುಕ್ತಿಯಲ್ಲಿ ।
ಪರಶುಧರಕೃಷ್ಣ ವಿಜಯವಿಠ್ಠಲರೇಯ ।
ಪರಿಣಾಮ ಕೊಡುವನು ಪರತತ್ತ್ವ ತಿಳಿವುದು ॥

॥ ಜತೆ ॥

ಭಾರ್ಗವ ಕ್ಷೇತ್ರದೊಳಿದೆ ಕೇವಲಧಿಕ
ದುರ್ಗಾರಮಣ ವಿಜಯವಿಠಲ ನಮ್ಮ ಪೊರೆವ ॥

## " ಶ್ರೀ ಮಧ್ವನಾಮ "

–3–

ರಾಗ : ಸೌರಾಷ್ಟ್ರ – ಉದಯರಾಗ

ಜಯ ಜಯ ಜಗತ್ರಾಣ ಜಗದೊಳಗೆ ಸುತ್ರಾಣ
ಅಖಿಳ ಗುಣ ಸದ್ಧಾಮ ಶ್ರೀ ಮಧ್ವನಾಮ ॥ ಪ ॥

ಅವಕಚ್ಛಪವ ರೂಪದಿಂದ ಲಂಡೋದಕವ
ಓವಿಧರಿಸಿದ ಶೇಷ ಮೂರುತಿಯನು ॥
ಆವನನ ಬಳಿಪಿಡಿದು ಹರಿಯು ಸುರರ್ವ್ಯದುಪರು
ಆವಾಯು ನಮ್ಮ ಕುಲ ಗುರುರಾಯನು ॥ 1 ॥

ಆವವನು ದೇಹದೊಳಗಿರಲು ಹರಿ ನೆಲಸಿಹನು
ಆವ (ವ) ನು ತೊಲಗೆ ಹರಿ ತಾ ತೊಲಗುವ
ಆವವನು ದೇಹದಾ ಒಳಹೊರಗೆ ನಿಯಾಮಕನು
ಆವಾಯು ನಮ್ಮ ಕುಲ ಗುರುರಾಯನು ॥ 2 ॥

ಕರಣಾಭಿಮಾನಿಸುರರು ದೇಹವ ಬಿಡಲು
ಕುರುಡ ಕಿವುಡ ಮೂಕನೆಂದೆನಿಸುವ ॥
ಪರಮ ಮುಖ್ಯಪ್ರಾಣ ಶೊಲಗಲಾ ದೇಹವನು
ಅರಿತು ಪೆಣನೆಂದು ಪೇಳುವರು ಬುಧಜನ ॥ 3 ॥

ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ
ಪರತರನೆನಿಸಿ ನಿಯಾಮಿಸಿನೆಲೆಸಿಹ ॥
ಹರಿಯುನಲ್ಲದೆ ಬಗೆಯು ಅನ್ಯರನು ಲೋಕದೊಳು
ಗುರುಕುಲತಿಲಕ ಮುಖ್ಯ ಪವಮಾನನು ॥ 4 ॥

ತ್ರೇತೆಯಲಿ ರಘುಪತಿಯ ಸೇವ ಮಾಡುವೆನೆಂದು
ವಾತಸುತ ಹನುಮಂತನೆಂದೆನಿಸಿದ ॥
ಪೋತಬಾವದಿ ತರಣಿ ಬಿಂಬಕ್ಕೆಲಂಘಿಸಿದ
ಈತಗೆಣೆಯಾರು ಮೂಲೋಕದೊಳಗೆ ॥ 5 ॥

ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ
ಉರವಣಿಸಿ ಹಿಂದು ಮುಂದಾಗಿ ನಡೆದ ॥
ಪರಮ ಪವಮಾನಸುತ ಉದಯಾಸ್ತ ಶೈಲಗಳ
ಭರಧಿಯೈದ ಗೀತಗುಪಮೆ ಉಂಟೆ ॥ 6 ॥

ಅಖಿಳ ವೇದಗಳ ಸಾರ ಪಠಿಸಿದನು ಮುನ್ನಲ್ಲಿ
ನಿಖಿಳ ವ್ಯಾಕರಣಗಳ ಇವ ಪೇಳಿದ ॥
ಮುಖದಲ್ಲಿ ಕಿಂಚಿದಪಶಬ್ಧ ಇವಗಿಲ್ಲೆಂದು
ಮುಖ್ಯಪ್ರಾಣನನು ರಾಮನನುಕರಿಸಿದ ॥ 7 ॥

ತರಣಿಸುತನನು ಕಾಯ್ದು ಶರಧಿಯನು ನೆರೆದಾಟಿ
ದರಣಿಸುತೆಯಳ ಕಂಡು ಧನುಜರೊಡನೆ ॥
ಭರದಿ ರಣವನೆ ಮಾಡಿ ಗೆಲಿದು ದಿವ್ಯಾಸ್ತ್ರಗಳ
ಉರುಹಿಲಂಕೆಯ ಬಂದ ಹನುಮಂತನು ॥ 8 ॥

ಹರಿಗೆ ಚೂಡಾಮಣಿಯನಿತ್ತು ಹರಿಗಳಕೂಡಿ
ಶರಧಿಯನು ಕಟ್ಟಿ ಬಲು ರಕ್ಕಸರನು ॥
ಒರಸಿ ರಾವಣ್ಣ ದಶಶಿರನ ಹಾಡಿಗುಟ್ಟಿ
ಮೆರೆವ ಹನುಮಂತ ಬಲವಂತ ಧೀರ ॥ 9 ॥

ಉರಗ ಬಂಧಕ ಸಿಲುಕಿ ಕಪಿವರರು ಮೈಮರೆಯೆ
ತರಣಿಕುಲತಿಲಕನಾಜ್ಞೆಯ ತಾಳಿದ ॥
ಗಿರಿ ಸಹಿತ ಸಂಜೀವನ ಕಿತ್ತು ತಂದಿತ್ತ
ಹರಿವರಗೆ ಸರಿಯುಂಟೆ ಹನುಮಂತಗೆ ॥ 10 ॥

ವಿಜಯ ರಘುಪತಿ ಮೆಚ್ಚಿ ಧರಣಿಸುತೆಯಳಿಗೀಯೆ
ಭಜಿಸಿ ಮೌಕ್ತಿಕದ ಹಾರವನು ಪಡೆದ ॥
ಅಜಪದವಿಯನು ರಾಮ ಕೊಡುವೆನೆನೆ ಹನುಮಂತ
ನಿಜ ಭಕುತಿಯನೆ ಬೇಡಿ ವರವ ಪಡೆದ ॥ 11 ॥

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ
ಸೋಮಕುಲದಲಿ ಜನಿಸಿ ಪಾರ್ಥನೊಡನೆ ॥
ಭೀಮ ವಿಕ್ರಮ ರಕ್ಕಸರ ಮುರಿದೊಟ್ಟಿದ
ಆ ಮಹಿಮ ನಮ್ಮ ಕುಲ ಗುರುರಾಯನು ॥ 12 ॥

ಕರದಿಂದ ಶಿಶುಭಾವನಾದ ಭೀಮನ ಬಿಡಲು
ಗಿರಿವಡೆದು ಶತಶೃಂಗವೆಂದೆನಿಸಿತು ॥
ಹರಿಗಳ ಹರಿಗಳಿಂಕರಿಗಳ ಕರಿಗಳಿಂ
ಅರೆವ ವೀರನಿಗೆ ಸುರನರರು ಸರಿಯೇ ॥ 13 ॥

ಕುರುಪ ಗರಳವನಿಕ್ಕೆ ನೆರೆ ಉಂಡುತೇಗಿ
ಹಸಿದರುಗಗಳ ಮೇಲೆ ಬಿಡಲವನೊರಸಿದ ॥
ಅರಗಿನಾ ಮನೆಯಲ್ಲಿ ಉರಿಯನಿಕ್ಕಲು ವೀರ
ಧರಿಸಿ ಜಾಹ್ನವಿಗೊಯ್ದು ತನ್ನನುಜರ ॥ 14 ॥

ಅಲ್ಲಿರ್ದ ಬಕ ಹಿಡಿಂಬಕರೆಂಬ ರಕ್ಕಸರ
ನಿಲ್ಲದೊರಸಿದ ಲೋಕಕಂಟಕರನು ॥
ಬಲ್ಲಿದನುರರಗೆಲಿದು ದ್ರೌಪದಿಯು ಕೈಪಿಡಿದು
ಎಲ್ಲ ಸುಜನರಿಗೆ ಹರುಷವ ತೋರಿದ ॥ 15 ॥

ರಾಜಕುಲವಜ್ರನೆನಿಸಿದ ಮಾಗಧನ ಸೀಳಿ
ರಾಜಸೂಯ ಯಾಗವನು ಮಾಡಿಸಿದನು ॥
ಆಜಿಯೊಳು ಕೌರವರ ಬಲವ ಸವರುವೆನೆಂದು
ಮೂಜಗವರಿಯೆ ಕಂಕಣ ಕಟ್ಟಿದ ॥ 16 ॥

ದಾನವರ ಸವರಬೇಕೆಂದು ಬ್ಯಾಗ
ಮಾನನಿಧಿ ಮನದಿಂಗಿತವನರಿತು ॥
ಕಾನನದಿ ಕಿಮ್ಮ್ರಾರಾದಿಗಳ ಮುರಿದು
ಮಾನಿನಿಗೆ ಸೌಗಂಧಿಕವನು ತಂದ ॥ 17 ॥

ದುರುಳ ಕೀಚಕನು ತಾಂ ದ್ರೌಪದಿಯು ಚೆಲುವಿಕೆಗೆ
ಮರುಳಾಗಿ ಕರಕರೆಯ ಮಾಡಲವನಾ ॥
ಗರಡಿಯಾ ಮನೆಯಲ್ಲಿ ಬರಸಿ ಅವನನ್ವಯವ
ಕುರುವನಟ್ಟಿದ ಮಲ್ಲಕುಲವ ನದೆದ ॥ 18 ॥

ಕೌರವರಬಲಸವರಿ ವೈರಿಗಳ ನಗ್ಗೊತ್ತಿ
ಓರಂತೆ ಕೌರವನ ಮುರಿದು ಮೆರೆದ ॥
ವೈರಿ ದುಶ್ಶ್ಯಾಸನ್ನ ರಣದಲ್ಲಿ ಎದೆಗೆಡಹಿ
ವೀರ ನರಹರಿಯು ಲೀಲೆಯ ತೋರಿದ ॥ 19 ॥

ಗುರುಸುತನು ಸಂಗರದಿ ನಾರಾಯಣಾಸ್ತ್ರವನು
ಉರವಣಿಸಿ ಬಿಡಲು ಶಸ್ತ್ರವ ಬಿಸುಟರು ॥
ಹರಿಕೃಪೆಯ ಪಡೆದಿರ್ದ ಭೀಮ ಹುಂಕಾರದಿಂ
ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ ॥ 20 ॥

ಚಂಡವಿಕ್ರಮನು ಗದೆಗೊಂಡು ರಣದಿ ಭೂ
ಮಂಡಲದೊಳಿದಿರಾಂತ ಖಳರನೆಲ್ಲಾ ॥
ಹಿಂಡಿ ಬಿಸುಟಿಹ ವೃಕೋದರನ ಪ್ರತಾಪವನು
ಕಂಡು ನಿಲ್ಲುವರಾರು ತ್ರಿಭುವನದೊಳು ॥ 21 ॥

ದಾನವರು ಕಲಿಯುಗದೊಳವತರಿಸಿ ವಿಬುಧರೊಳು
ವೇನನ ಮತವನುರುಹಲದನರಿತು ॥
ಜ್ಞಾನಿ ತಾ ಪವಮಾನ ಜೊತೆಳದೊಳವತರಿಸಿ
ಮಾನನಿಧಿ ಮಧ್ವಾಖ್ಯಸೆಂದೆನಿಸಿದ ॥ 22 ॥

ಅರ್ಭಕತನದೊಳೈದಿ ಒದರಿಯುಲಿ ಮಧ್ವಮುನಿ
ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ ॥
ಉರ್ವಿಯೊಳು ಮಾಯೆಬೀರಲು ತತ್ತ್ವಮಾರ್ಗವನು
ಒರ್ವ ಮಧ್ವಮುನಿ ತೋರಿದ ಸುಜನರ್ಗೆ ॥ 23 ॥

ಸರ್ವೇಶ ಹರಿ ವಿಶ್ವ ತಾ ಪುಸಿಯೆಂಬ
ದುರ್ವಾದಿಗಳ ಮತವ ನೆರೆಖಂಡಿಸಿ ॥
ಸರ್ವೇಶ ಹರಿ ವಿಶ್ವಸತ್ಯವೆಂದರುಹಿದಾ
ಶರ್ವಾದಿ ಗೀರ್ವಾಣ ಸಂತತಿಯುಲಿ ॥ 24 ॥

ಪರಶುರಾಮಕ್ಷೇತ್ರ ಉಡುಪೆಂಬ ಗ್ರಾಮಕ್ಕೆ
ಮೂರು ಕ್ರೋಶದಲಿದ್ದ ಕಡಲತಟಿಕೆ ॥
ಪರಮಪಾವನ ತನು ಮಧ್ವಮುನಿ ಹರುಷದಲಿ
ಹರಿಯಧ್ಯಾನದಿ ತಪಗೈಯುತಿರಲು ॥ 25 ॥

ಅಳಕಂಕಚರಿತ ಶ್ರೀಹರಿ ಬಂದು ಪಡಗದಲಿ
ಶಿಖಿಸಖನ ಬೆನೆದಿರ ನಿಂತಿತಲ್ಲೀ ॥
ಸಕಲನ್ನ ಮುನಿತನ್ನ ಪತಿಯು ಬಂದಿಹನೆಂದು
ಸುಖತೀರ್ಥ ಗುರು ಕರದಿ ವಸನ ಬೀಸೆ ॥ 26 ॥

ಆವಾಯುನಿಂದಲ್ಲಿ ಹಡಗ ದಡಕೆ ತರಲು
ಆವಾಯುಸುತನಂಘ್ರಿ ಕಂಡಧನವ ॥
ದೇವಾಧಿದೇವ ನಮೋ ದೇವಾಂತರಾತ್ಮ ನಮೋ
ಜೀವದಾಯಕ ಜಗಜ್ಜೀವನೊಡಿಯಾ ॥ 27 ॥

ನೆಂದು ಕೊಂಡಾಡಿ ಮುಕ್ಕೊಂಡು ವಂದನೆಮಾಡಿ
ತಂದ ಭಾಗ್ಯವು ನಿಮ್ಮದೆಂದು ನುಡಿಯೆ ॥
ನಂದ ತೀರತ ಗೋಪಿ ಚಂದನದ ಕರಣಿಗಳ
ಮುದದಿ ಮೂರೆನದಿತ್ತು ನಡಿಯೊಂದನು ॥ 28 ॥

ಧನವನಿಂದಲಿ ತಂದ ಮೂರು ಕರಣಿಗಳೊಳಗೆ
ಘನ ಭುಜಗಳಲ್ಲೆರಡು ಶಿರದೊಳೊಂದು ॥
ಮುನಿರಾಜ ಧರಿಸಿ ತನ ಮಾನದೊಡಯನಂಘ್ರಿಗಳೆ
ಘನದ್ವಾದಶ ಸ್ತೋತ್ರದಿಂದ ಸ್ತುತಿಸಿ ॥ 29 ॥

ತರುವಾಗವರೊಳೊಂದಾರಿ ಬೆಟ್ಟವ ಸೇರಿ
ಹರಿ ಸಹೋದರಿ ದುರ್ಗೆ ಎನಿಸಿ ನಿಲಲು ॥
ಮರಳೊಂದು ಕರಣಿಯು ಶರದಿ ತೀರದಿ ವಡಮ
ಹರಿ ಸಹೋದರ ಬಲರಾಮ ನೆಲಸೆ ॥ 30 ॥

ಮೂರನೇ ಕರಣಿಯಲಿ ಮೂಜಗವ ಜನಕನಿರೆ
ಚಾರುವುಡುಪಿಗೆ ತಂದು ವಿವರಗೈಸೆ ॥
ಮೂವತ್ತು ಜನಕೂಡಿ ಸುಪ್ರತೀಕವನು ತರಲಾಗದಲಿ
ಕೈಮುಗಿದು ಶರಣಗೈಯ ॥ 31 ॥

ಮೂರುಲೋಕಕೆಗುರು ಭಾರತೀರಮಣಾಖ್ಯ
ಶ್ರೀಮಧ್ವಮುನಿ ತಮ್ಮ ಕರಗಳಿಂದಾ ॥
ಶೌರಿ ಶ್ರೀಪತಿಯಾದ ಶ್ರೀಕೃಷ್ಣಮೂರ್ತಿಯನು
ಸಾರ ಹೃದಯದಿ ನಿಲಿಸಿ ಸ್ಥಿರವಗೈಸೆ ॥ 32 ॥

ಮತ್ತೆಂಟುಶಿಷ್ಯರಿಗೆ ಕೊಟ್ಟು ಸನ್ಯಾಸವನು
ಕೃಷ್ಣನಂಘ್ರಿಯ ಪೂಜೆಮಾಡಿರೆಂದು ॥
ಸೃಷ್ಟೀಶನಾಜ್ಞದಿಂ ಪುನರಪಿ ಬದರಿಗೆ
ಶ್ರೇಷ್ಠಗುರುಗಳು ತೆರಳೆ ಶಿಷ್ಟ ಜನರು ॥ 33 ॥

ಇಷ್ಟಗುರುಗಳ ವಾದ ಬಿಟ್ಟಿರದೆ ಬರುತಿರಲು
ಕಾಷ್ಟಮೌನವ ಮಾಡಿ ಗುರುರಾಜರು ॥
ಘಟ್ಟಿ ಗುಂಡಿನ ಮೇಲೆ ಬರೆದು ಇಷ್ಟಾರ್ಥವನು
ಕೊಟ್ಟು ಹೋದರು ತಮ್ಮ ಶ್ರೇಷ್ಟಜನಕೆ ॥ 34 ॥

ಪ್ರೀತಿಯಲಿ ಶ್ರೀಕೃಷ್ಣ ದ್ವೈಪಾಯನರ ಕಂಡು
ಗೀತಭಾಷ್ಯವನು ಅರಿಕೆ ಮಾಡಿ ॥
ಶ್ರೋತವ್ಯರಾದ ಋಷಿ ಸಂತತಿಗೆ ಬೋಧಿಸಿ
ಶ್ರೀಪತಿಯ .. ...... ರಿಂದ ಬಂದು ॥ 35 ॥

ಮೂಲ ಮೂವತ್ತೇಳು ಗ್ರಂದಗಳ ರಚಿಸಿ
ನಿಮೂರ್ಲ ಮಾಡಿದರು ಮಾಯಿಮತಗಳೆಲ್ಲ ॥
ಮೇಲೆನಿಸಿ ಮಧ್ವಮತ ಮೂರ್ಲೋಕದೊಳು ಬೀರಿ
ವಾಲೈಸಿ ಶ್ರೀಮಧ್ವಮುನಿಯು ಮೆರೆದ ॥ 36 ॥

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ
ಪದಕೆರಗಿ ಅಖಿಳ ವೇದಾರ್ಥಗಳನು ॥
ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ
ಐದಿದ ಮಧ್ವಮುನಿರಾಯಗಭಿವಂದಿಪೆ ॥ 37 ॥

ತುಂಗಕುಲಗುರುವರನ ಹೃತ್ಕಮಲದಲಿ ನಿಲಿಸಿ
ಭಂಗವಿಲ್ಲದೆ ಸುಖವ ಸುಜನರಿಗೆಲ್ಲ
ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ
ರಂಗವಿಠಲನೆಂದು ನರೆ ಸಾರಿರೈ ॥ 38 ॥

## " ಫ ಲ ಸ್ತು ತಿ "

ಶ್ರೀ ಜಗನ್ನಾಥದಾಸರ ಕೃತಿ

ಸೋಮ ಸೂರ್ಯೋಪರಾಗದಲಿ ಗೋ ಸಹಸ್ರಗಳ
ಭೂಮಿದೇವರಿಗೆ ಸುರನದಿಯ ತಟದಿ
ಶ್ರೀ ಮುಕುಂದಾರ್ಪಣವೆನುತ ಕೊಟ್ಟ ಫಲದಕ್ಕು
ಈ ಮಧ್ವನಾಮ ಬರೆದೋದಿದರ್ಗೆ ॥ 1 ॥

ಪುತ್ರರಿಲ್ಲದವರು ಸತ್ಪುತ್ರರೈದುವರು
ಸರ್ವತ್ರದಲಿ ದಿಗ್ವಿಜಯವಹುದು ಸಕಲ
ಶತ್ರುಗಳು ಕೆಡುವರಪಮೃತ್ಯು ಬರಲಂಜುವುದು
ಸೂತ್ರನಾಮಕನ ಸಂಸ್ತುತಿ ಮಾತ್ರದಿ ॥ 2 ॥

ಶ್ರೀಪಾದರಾಯಮುನಿ ಪೇಳಿದ ಮಧ್ವನಾಮ ಸಂ
ತಾಪ ಕಳೆದಖಿಳ ಸೌಖ್ಯವ ನೀವುದು
ಶ್ರೀಪತಿ ಜಗನ್ನಾಥವಿಠಲನ ತೋರಿಭವ
ಕೂಪಾರರಿಂದ ಕಡೆ ಹಾಯಿಸುವುದು ॥ 3 ॥

–1–

ಶ್ರೀ ಮಧ್ವಃ ಕಲಿಯುಗೇ ಸಜ್ಜನಾನಾಂ ಪೂಜನ ದರ್ಶ
ನಾದಿನಾ ನಿಃ ಶ್ರೇಯಸ ವಿಘ್ನಾದಿ ದೋಷವಿಘಾತಾರ್ಥಂ ಶ್ರೀಕೃಷ್ಣಂ
ಪ್ರತಿಷ್ಠಾಪಯಾಮಿತಿ ಸತ್ಸುದಯಯಾ .. ಕಾಮಯತೆ 1 ತದಾ
ದ್ವಾರಕಾಯಾಂ ರುಗ್ಮಿಣಿ ಪನಾಖ್ಯಪ್ರದೇಶೇ ಗೋ –
ಪೀ ಚಂದನ ಬುದ್ಧ್ಯಾ ಸಾಲಿಯಾತ್ರಿಕೈರಾನೀತಂ ರೂಪ್ಯಪೀರ ಸ –
ಮೀಪೇ ಪ್ಲವೇ ಭಿನ್ನೇ ಜಲದಾ ಮಗ್ನಾಂ ಶ್ರೀಕೃಷ್ಣ ಪ್ರತಿಮಾನೀಯ
ಶಿಷ್ಯೈಸ್ತಟಾಕೇ ಶೋಧಯಿತ್ವಾ ಸ್ವಯಮಭಿಷಿಚ್ಯ ಸಮಂತ್ರಕಂ
ಸ್ಥಲಸ್ಥಾತ್ವಽತ ಏವ ಭಗವತ್ ಸನ್ನಿಧಾನಾತಿಶಯ ಭರಿತಾಮತ
ಏವ ತ್ರಿಂಶಟ್ಟಿಪ್ಟೈರಪಿ ಸುದರ್ಧರಾಂ ಲೋಕೇ ಬಾಲಕಮಿವ
ಸ್ವಯಮೇವಾಽ ನೀಯ ಮಠೇ ಸ್ಥಾಪಯಾಮಾಸೇತಿ

( ಪ್ರಮೇಯ ನವಮಾಲಿಕಾ ಟೀಕೆ )

–2–

ರೌಪ್ಯಪೀರ ಕೃಷ್ಣಾಷ್ಟಕ

ಪಾಲಯಾಚ್ಯುತ ಪಾಲಯಾಜಿತ ಪಾಲಯಾ ಕಮಲಾಲಯ
ಲೀಲಯಾ ಧೃತ ಭೂಧರಾಂಬುರುಹೋದರ ಸ್ವಜನೋದರ

ಮಧ್ವಮಾನಸ ಪದ್ಮಭಾನುಸಮಂ ಸ್ಮರ ಪ್ರತಿಸಂಸ್ಮರ
ಸ್ನಿಗ್ಧ ನಿರ್ಮಲ ಶೀತಕಾಂತಿ ಲಸನ್ಮುಖಂ ಕರುಣೋನ್ಮುಖಂ ।
ಹೃದ್ಯ ಕಂಬು ಸಮಾನ ಕಂದರಮಕ್ಷಯಂ ದುರಿತಕ್ಷಯಂ
ಸ್ನಿಗ್ಧ ಸಂಸ್ತುತೆ ರೌಪ್ಯಪೀತಕೃತಾಲಯಂ ಹರಿಮಾಲಯಮ್ ॥ ಪಾಲಯಾ ॥

ಅಂಗದಾದಿ ಸುಶೋಭಿಪಾಣಿಯುಗೇನ ಸಂಕ್ಷುಭಿತೈನಸಂ
ತುಂಗಮಾಲ್ಯ ಮಣೀಂದ್ರ ಹಾರ ಸರೋರಸಂ ಖಲನೀರಸಮ್ 1
ಮಂಗಲಪ್ರದ ಮಂಥದಾಮ ವಿರಾಜತಂ ಭಜತಾಜಿತಂ
ತಂ ಗೃಣೀವರ ರೌಪ್ಯಪೀರ ಕೃತಾಲಯಂ ಹರಿಮಾಲಯಮ್ ॥ ಪಾಲಯಾ ॥

ಪೀನರಮ್ಯ ತನೂದರಂ ಭಜ ಹೇಮನಃ ಶುಭ ಹೇ ಮನಃ

ನ್ಯಾಸುಭಾವ ನಿದರ್ಶನಾಯ ದಿಶಾಂತಮರ್ಗನಾಂತಮಾರ್ಗ್ ।
ಆಸತೋಽಸ್ಮಿ ನಿಜಾರ್ಜುನಪ್ರಿಯ ಸಾದಕಂ ಮಿಂಡಾವಕಂ
ಹೀನತೋಜ್ಝಿತ ರೌಪ್ಯಪೀಠಕೃತಾಲಯಂ ಹರಿಮಾಲಯಾಮ್ ॥ ಪಾಲಯಾ ॥

ಹೇಮ ಕಿಂಕಿಣಿಮಾಲಿಕಾ ರಶನಾಂಚಿತಂ ತಮಾಮಯತಂ
ರಕ್ತ ಕಾಂಚನ ಚಿತ್ರವಸ್ತ್ರಕಟಿಂ ಘನಪ್ರಭಯಾ ಘನಂ ।
ಕಮ್ರನಾಗ ಕರೋಪಮೋರುಮನಾಮಯಂ ಶುಭದಂ ಮುದಾ
ಸೌಮ್ಯಹಂ ಪರರೌಪ್ಯಪೀಠ ಕೃತಾಲಯಂ ಹರಿಮಾಲಯಾಮ್ ॥ ಪಾಲಯಾ ॥

ವೃತ್ತಜಾನು ಮನೋಜ್ಞ ಜಂಘಮಮೋಘಮಂ ಪರಮೋದಮಂ
ರತ್ನಕಲ್ಪನಖತ್ವಿಷಾ ಕೃತಹೃತ್ತಮಸ್ತತಿ ಮುತ್ತಮಮ್ ।
ಪ್ರತ್ಯಹಂ ರಚಿತಾರ್ಚನಂ ರಮಯಾ ಸ್ವಯಾಗತಯಾನ್ಯಯಾ
ಚಿತ್ತ ಚಿಂತಯ ರೌಪ್ಯಪೀಠಕೃತಾಲಯಂ ಹರಿಮಾಲಯಾಮ್ ॥ ಪಾಲಯಾ ॥

ಚಾರುಪಾದ ಸರೋಜಯುಗ್ಮ ರುಚಾಽಮರೋಚ್ಚಯ ಚಾಮರೋ-
ದಾರ ಮೂರ್ಧಜ ಭಾರಮಂಡಲರಂಜಕಂ ಕಲಿಭಂಜಕಂ ।
ವೀರತೋಚಿತ ಭೂಷಣಂ ಪರನೂಪುರಂ ಸ್ವತನೂಪುರಂ
ಧಾರಯಾಽತ್ಮನಿ ರೌಪ್ಯಪೀಠ ಕೃತಾಲಯಂ ಹರಿಮಾಲಯಾಮ್ ॥ಪಾಲಯಾ॥

ಶುಷ್ಕವಾದಿ ಮನೋಽತಿದೂರತರಾಗಮೋತ್ಥ ಸದಾಗಮಂ
ಸತ್ಕವೀಂದ್ರ ವಚೋವಿಲಾಸ ಮಹೋದಯಂ ಮಹಿತೋದಯಂ ।
ಲಕ್ಷಯಾಮಿ ಯತೀಶ್ವರೈಃ ಕೃತಪೂಜನಂ ಗುಣಭಾಜನಂ
ಧಿಕ್ಕೃತೋಪಮ ರೌಪ್ಯಪೀಠಕೃತಾಲಯಂ ಹರಿಮಾಲಯಾಮ್ ॥ ಪಾಲಯಾ ॥

ನಾರದಪ್ರಿಯಮಾವಿಶಾಂಬುರುಹೇಕ್ಷಣಂ ನಿಜಲಕ್ಷಣಂ
ತಾರಕೋಪಮ ಚಾರುದೀಪಚಯಾಂತರೇ ಗತಚಿಂತರೇ ।
ಧೀರಮಾನಸ ಪೂರ್ಣಚಂದ್ರ ಸಮಾನಮಚ್ಯುತ ಮಾನಸ –
ದ್ವಾರಕೋಪಮ ರೌಪ್ಯಪೀಠಕೃತಾಲಯಂ ಹರಿಮಾಲಯಾಮ್ ॥ಪಾಲಯಾ॥

ರೌಪ್ಯಪೀಠಕೃತಾಲಯಸ್ಯ ಹರೇಃ ಪ್ರಿಯಂ ದುರಿತಾಪ್ರಿಯಂ
ತತ್ಪದಾರ್ಚಕ ವಾದಿರಾಜ ಯತೀರಿತಂ ಗುಣಪೂರಿತಂ ।
ಗೌಪ್ಯಮಷ್ಟಕಮೇತದುಚ್ಚಮುದೇ ಮಮಾಸ್ತ್ವಿಹ ನಿರ್ಮಮ
ಪ್ರಾಪ್ಯ ಸೌಖ್ಯಫಲಾಯ ತತ್ರ ಸುಕೋಮಲಂ ಹೃತಧೀಮಲಮ್॥ಪಾಲಯಾ॥

ಪಾಲಯಾಚ್ಯುತ ಪಾಲಯಾಜಿತ ಪಾಲಯಾ ಕಮಲಾಲಯ
ಲೀಲಯಾಧೃತ ಭೂಧರಾಂಬುರುಹೋದರ ಸ್ವಜನೋದರ ।
॥ ಇತಿ ಶ್ರೀಮದ್ವಾದಿರಾಜ ಪೂಜ್ಯಚರಣವಿರಚಿತ ಶ್ರೀ ರೌಪ್ಯಪೀಠಕೃಷ್ಣಾಷ್ಟಕಂ

–3–

# " ಶ್ರೀ ಕೃಷ್ಣ ಸ್ತುತಿ "

ಶ್ರೀ ವಾದಿರಾಜತೀರ್ಥರ ಕೃತಿ

ಯದಿ ದಿಶಸಿ ನಯನಪಟುತಾಂ ತರ್ಹಿ ಭವಚ್ಚರಣಕಮಲಸೇವಾಯೈ ।
ಆಯಾಸ್ಯಾಮಿ ದಯಾಲೋ ಕೃಷ್ಣ ನ ಚೇತ್ಪೂಜಯಾಮಿ ಕಥಮಂಧಃ ॥ 1 ॥

ಸಂಭಾವಿತಸ್ಯ ಪ್ರಂಸೋ ಮರಣಾದತಿರಿಚ್ಯತೇ ಕಿಲಾಕೀರ್ತಿಃ ।
ಇತಿ ಗೀತಾಸು ಗೀತಂ ಭವತಾ ಭವತಾದ ತಿಮಿರರವೇ ॥ 2 ॥

ನಾನಾಪರಾಧಶತಕಂ ಹೀನೇ ಯದ್ಯಸ್ತಿ ಕೃಷ್ಣಮಯಿ ಮರ್ತ್ಯೇ ।
ದೀನಾನಾಮುದ್ಧರ್ತ್ರಾ ಕ್ಷಂತವ್ಯಂ ತತ್ಕ್ಷಮಾವತಾ ಭವತಾ ॥ 3 ॥

ಕುಂತಲ ಸಂತತಿ ಲಸಿತಂ ಚೂಡಾತ್ರಯ ಶೋಭಿಮೌಳಿಭಾಗಮಹಂ ।
ಶತಪತ್ರ ಪತ್ರನೇತ್ರಂ ಶಶಿವದನಂ ಪ್ರತಿದಿನಂ ದಿದೃಕ್ಷಾಮಿ ॥ 4 ॥

ಕುಂಡಲ ಮಂಡಿತಗಂಡಂ ಕಂಬುಗ್ರೀವಂ ಮನೋರಮೋರಸ್ಕಂ ।
ದಂಡಂ ದಾಮಚ ದಧತಂ ಪಾಂಡವಸಖಮರ್ಚ್ಯಮರ್ಚಯಾಮಿ ಕದಾ ॥ 5 ॥

ರಮ್ಯ ತನೂದರ ಜಘನಂ ಕಮ್ರೋರುಂ ವೃತ್ತಜಾನುಯುಗ ಜಂಘಮ್ ।
ರಕ್ತಾಬ್ಜಸದೃಶಪಾದಂ ಹಸ್ತಾಭ್ಯಾಂ ತ್ವಾರ್ಚಯಾಮಿ ಸದಯಕದಾ ॥ 6 ॥

ದೋಷಾತಿದೂರಂ ಶುಭಗುಣ ರಾಶಿಂ ದಾಶೀಕೃತಾಖಿಲನಿಮಿಷಂ ।
ಭೂಷಣ ಭೂಷಿತಗಾತ್ರ ನೇತ್ರಾಭ್ಯಾಂ ಚಿತ್ರಚರಿತ ವೀಕ್ಷೇ ತ್ವಾಂ ॥ 7 ॥

ಮಧ್ವಪ್ರತಿಷ್ಠಿತಂ ತ್ವಾಂ ವಿಧ್ವಸ್ತಾಶೇಷ ಕುಜನಕುಲಮ್ ।
ಮೂರ್ಧ್ನಾ ಪ್ರಣಮ್ಯಯಾಚೇ ತದ್ವಿರಚಯ ಯದ್ಧಿತಂ ಮಮಾದ್ಯ ಹರೇ ॥ 8 ॥

ಸ್ತುತಿಮತಿ ಪುಣ್ಯಕಥನ ತೇ ಪ್ರಥಿತಕೃತೇ ವಾದಿರಾಜ ಯತಿರಕೃತ ।
ಸತತಂ ಪರತಾ ಹಿ ಸತಾಮತಿವಿಶದಾಂ ದೇಹಿ ಕೃಷ್ಣ ವಿತತಮತಿಮ್ ॥ 9 ॥

## ಶ್ರೀ ವಾದಿವಂದ್ಯತೀರ್ಥ ಕೃತ ಕೃಷ್ಣಸ್ತೋತ್ರಂ

ಶ್ರೀ ಬ್ರಹ್ಮ ರುದ್ರ ಗರುಡೇಂದ್ರನತಂ ಶರಣ್ಯಂ ಸರ್ವಾಶುಭ ಪ್ರಶಮನಂ
ಭುವನೈಕನಾಥಮ್ ।
ಸದ್ರೂಪ್ಯ ಪೀಠವರ ಮಧ್ಯಮಿಂದಿರೇಶಂ ಗೋವರ್ಧನೋದ್ಧರಣದಕ್ಷ
ಮಹಂ ನತೋಽಸ್ಮಿ ॥೧॥

ವಜ್ರಾಂಕುಶಧ್ವಜ ಸರೋಜಯುತಾಂಘ್ರಿಮೂಲಂ ಸಂದೀಪ್ತಮಾನ ನಖ
ಚಂದಿರ ಕಾಂತಮ್ ॥
ಸಿಂಜತ್ಸುನೂಪುರಪದಂ ವರವೃತ್ತಜಂಘಮ್ ಪೂರ್ಣೇಂದು ಮಾನ
ಸಮವರ್ತುಲ ಜಾನುಯುಗ್ಮಮ್ ॥ ೨ ॥

ಸ್ತಂಭೇರವೇಂದ್ರ ಸುಕರೋರು ಮುದಾರಕಾಂಚೀ ಪೀತಾಂಬರೋಪವೃತ
ಕಟಿಂ ಶುಭ ನಿಮ್ನ ನಾಭಿಮ್ ॥
ಶಾತೋದರಾರ್ಪಿತ ವಲಿತ್ರಯ ಮಬ್ಜನಾಭಿಂ ಶ್ರೀ ವತ್ಸ ಕೌಸ್ತುಭ
ರಮಾಲಯ ವಕ್ಷಸಂತಮ್ ॥ ೩ ॥

ಶ್ರೀ ಕಂಬು ಕಂಧರ ಸಮರ್ಪಿತ ವೈಜಯಂತೀ ಸದ್ಹಾರಕುಂಜ
ಶುಭ ಮಾಲಿಕಯೋಲ್ಲಸಂತಮ್ ।
ಸದ್ದಂಡ ಪಾಶಕರ ಮೂರ್ಜಿತ ಹಾರ ಜೂಷಮ್ । ಬಿಂಬಾಧರೋಷ್ಠಮರ
ವಿಂದದಲಾಯತಾಕ್ಷಮ್ । ೪ ।

ಕರ್ಣೋಜ್ವಲನ್ಮಕರ ಕುಂಡಲ ಶೋಭಿಗಂಡಂ ಸದ್ರತ್ನ ಮೌಕ್ತಿಕಲಸಚ್ಛು
ಭನಾಸಿಕಾಢ್ಯಮ್ ।
ಶಾಙ್ಗಾಯಿತ ಭುವಮಗಣ್ಯ ಗುಣಾಭಿರಾಮ ಮುದ್ಯದ್ದಿವಾಕರ ವಿಭಾಭ
ವಿಶಾಲ ಫಾಲಮ್ । ೫ ।

ಶ್ರೀಮತ್ಕಿರೀಟವರಮಂಡಿತ ರಮ್ಯಶೀರ್ಷಮಾದ್ಯಂತಶೂನ್ಯಮಸಿತಂ ಸುಖತೀರ್ಥ
ನಾಥಮ್ ಶ್ರೀ ನಂದನಮಮೇಯಮಗಾಧಿಬೋಧಮಿಹಾಪತ್ಸ್ಮಿತೇಂದು ವದನಂ
ಶರಣಂ ವ್ರಜಾಮಿ । ೬ ।

ಕಿ ಲಸಂಸ್ತವೀಮಿತವ ಮತ್ಸ್ಯ ಸುಕೂರ್ಮಕೋಲ ಶ್ರೀಮನ್ನೃಸಿಂಹ ವರ
ವಾಮನ ಭಾರ್ಗವೇಶ ।
ಶ್ರೀ ಜಾನಕೀರಮಣ ಯಾದವ ಕೃಷ್ಣ ಬುದ್ಧ ಕಲ್ಕ್ಯಾದಿ ರೂಪಕೃತಿ
ಸೇವಿತ ಸತ್ಸ್ವಭಾವ । ೭ ।

ಶ್ರೀ ಕೃಷ್ಣದೇವ ಕರುಣಾಕರ ಸೌಮ್ಯರೂಪ ಶ್ರೀ ವಾದಿರಾಜ ಮುನಿ
ಹೃತ್ಕಮಲಾಧಿವಾಸ ।
ಚಕ್ರೋತ್ಸವೇಪ್ಸಿತ ಸುತತ್ತ್ವರಹಸ್ಯದೀಪ ಮಾಂ ಪಾಹಿ ತೇ ಚರಣ ಸೇವಕ
ಭೃತ್ಯ ಭೃತ್ಯಮ್ । ೮ ।

ವಾದಿಪಂಚಾಸ್ಯಯತಿನಾ ಕೃಷ್ಣಸ್ತೋತ್ರಂ ಮಿದಂ ಕೃತಮ್ ।
ಪಠೇತ್ ಕೃಪಾಪ್ತಯೇಽಜಸ್ರಂ ಪಠಿತಃ ಪ್ರೀಯತೇ ಹರಿಃ ॥

॥ ಶ್ರೀ ವಾದಿಪಂಚ್ಯಯತಿಕೃತಾ ಶ್ರೀಕೃಷ್ಣ ಸ್ತೋತ್ರಂ ಸಂಪೂರ್ಣಂ ॥

## ಶ್ರೀ ವಾದಿರಾಜರಾಸ್ವಾಮಿಗಳ ಕೃತಿ

### " ಅಷ್ಟ ಮಹಿಷೀಯುಕ್ತ ಕೃಷ್ಣಸ್ತೋತ್ರಮ್ "

ಹೃದ್ಗುಹಾಶ್ರಿತ ಪಕ್ಷೀಂದ್ರ ವಲ್ಗುವಾಕ್ಯೈಃ ಕೃತಸ್ತುತೇ ।
ತದ್ಗರುತ್ಕಂಧರಾರೂಢ ರುಕ್ಮಿಣೀಶ ನಮೋಽಸ್ತುತೇ ॥ 1 ॥

ಅತ್ಯುನ್ನತಾಽಖಿಲೈಃ ಸ್ತುತ್ಯ ಶ್ರುತ್ಯಂತಾತ್ಯಂತ ಕೀರ್ತಿತ
ಸತ್ಯಯೋಜಿತ ಸತ್ಯಾತ್ಮನ್ ಸತ್ಯಭಾಮಾಪತೇ ನಮಃ ॥ 2 ॥

ಜಾಂಬವತ್ಯಾಃ ಕಂಬುಕಂಠಾಲಂಬಿಜೃಂಭಿ ಕರಾಂಬುಜ ।
ಶಂಭು ತ್ರ್ಯಂಬಕ ಸಂಭಾವ್ಯ ಸಾಂಬತಾತ ನಮೋಽಸ್ತು ತೇ ॥ 3 ॥

ನೀಲಾಯ ವಿಲಸದ್ಭೂಷಾ ಜಾಲಾಯೋಜ್ಜ್ವಲಮಾಲಿನೇ ।
ಲೋಲಾಕ್ಷೀಧೃತ್ಯಾಲಾಯ ಕಾಲಿಂದೀ ಪತಯೇ ನಮಃ ॥ 4 ॥

ಚೈತ್ರ ಚಿತ್ರ ಚರಿತ್ರಾಯ ಶಾತ್ರವಾನೀಕ ಮೃತ್ಯವೇ ।
ಮಿತ್ರ ಪುರಾಶಿಯ ನಮೋ ಮಿತ್ರವಿಂದಾ ಪ್ರಿಯಾಯ ತೇ ॥ 5 ॥

ಬಾಲಸತ್ಪೋತ್ಸವಾನಂತ ಲೀಲಾಲಾವಣ್ಯ ಮೂರ್ತಯೇ ।
ನೀಲಾಕಾಂತಾಯ ತೇ ಭಕ್ತಾವಾಲಾಯಾಽಸ್ತು ನಮೋನಮಃ ॥ 6 ॥

ಭದ್ರಾಯ ಸ್ವಜನಾವಿದ್ಯಾ ನಿದ್ರಾವಣಾಯ ವೈ ।
ರುದ್ರಾಣೀ ಭದ್ರಮೂಲಾಯ ಭದ್ರಾಕಾಂತಾಯ ತೇ ನಮಃ ॥ 7 ॥

ರಕ್ಷಿತಾಖಿಲ ವಿಶ್ವಾಯ ಶಿಕ್ಷಿತಾಖಿಲ ರಕ್ಷಸೇ ।
ಲಕ್ಷಣಾಪತಯೇ ನಿತ್ಯ ಭಿಕ್ಷುಶ್ಲಾಘ್ಯಾಯ ತೇ ನಮಃ ॥ 8 ॥

ವಕ್ಷಸ್ಥಲಂ ವಿಶದಹಾರ ವಿರಾಜಿ ವಿಷ್ಣೋ–
ರ್ಲಕ್ಷ್ಮೀ ವಿಶಾಲಗೃಹಮಸ್ತು ಮಮಾಂತರಂಗೇ ।
ನಕ್ಷತ್ರರಾಜಿ ಸುವಿರಾಜಿ ನಿರೇಷಜಿಂಬ
ಲಕ್ಷ್ಯಾಂಬರೋಪಮಮಪಾರ ಗುಣಾಂಬುರಾಶೇ . ॥ 16 ॥

ರತ್ನಾಢ್ಯ ಚಂಚು ಫಣ ಮಂಚಕ ಭೋಗಿ ಭೋಗಂ
ಸ್ವಸ್ಪರ್ಧಿ ಜೀಶುವಿವ ದಂಡಮುಪಾಶಧಾರಿ ।
ಸತ್ಕಂಕಣಾಂಗದ ಸುಶೋಭ ಶುಭಾಂಗುಲಿಯಂ
ಹಸ್ತದ್ವಯಂ ಮಮ ತಮೋತ್ಥಭಯಂ ಮುರಾರೇ ॥ 17 ॥

ವಕ್ತ್ರಾಲಕಂ ವರನಸೋಜ್ವಲ ಕುಂಡಲಾಭ್ಯಾಂ
ಯುಕ್ತಂ ತ್ರಿರೇಖಿ ಗಲಮುನ್ನತ ಮೌಲಿಬಂಧಮ್ ।
ವಕ್ತ್ರಂ ವಿಭೋರ್ಮಧುಪ ಮೌಕ್ತಿಕ ಮತ್ಸ್ಯ ಶಂಖ–
ಶೈವಾಲಶಾಲಿ ಕಮಲದ್ಯುತಿ ಮೇಽಕ್ಷಿ ಭೂಯಾತ್ ॥ 18 ॥

ಅಮ್ಲಾನ ಪದ್ಮದಲಮಾತ್ಮರುಚಾಽನು ಕುರ್ವ –
ದಾಮ್ನಾಯ ಕೋವಿದ ಬುಧೇಷ್ಟ ಕೃತ ಪ್ರಚಾರಮ್ ।
ರಮ್ಯ ವಿಲೋಚನಯುಗಂ ಪ್ರೀತವೀಕ್ಷಿತಾಂ ಮಾಂ
ಸನ್ಮಧ್ವಪೂಜಿತ ಪದಾಬ್ಜಯುಗಸ್ಯ ತಸ್ಯ ॥ 19 ॥

ಮುಗ್ಧಾನನೇನ ನಯನೇನ ಕರೇಣ ನಾಭಿ –
ಚ್ಛಿದ್ರೇಣ ಪಾದಯುಗಲೇನ ಧೃತಾಬ್ಜ ಸಾಮ್ಯಮ್ ।
ಪದ್ಮಾಲಯೋಜಿರ್ಝುತಿಕದಾಽಪಿ ನ ದೇವಮೇನಂ
ಮಧ್ವಪ್ರಿಯಂ ಪ್ರಿತಿ ಕಿಮತ್ರ ಗಿರಾಂ ವಿಚಾರೈ ॥ 10 ॥

ಅಪಾದಮಾ ಚ ಮುಕುಟಾನ್ಮುರ ವೈರಿಣೋಽತ್ರ
ಸ್ತೋತ್ರ ತದೇತದನವದ್ಯಮಪದ್ಯ ಜೈತ್ರಮ್ ।
ಗೋಪಾಲ ವಾಜಿಮುಖ ಕಿಂಕರ ವಾದಿರಾಜ
ಪ್ರೋಕ್ತಂ ಪರನ್ ಭವತಿ ತತ್ಸದಯೋಕ್ಷಿ ಲಕ್ಷಮ್ ॥ 11 ॥

॥ ಇತಿ ಶ್ರೀ ಮದ್ವಾದಿರಾಜಯತಿ ಪ್ರೋಕ್ತಮಾಪಾದಸ್ತೋತ್ರಂ ಸಂಪೂರ್ಣಂ ॥

ನಾರಾಯಣಪಂಡಿತಾಚಾರ್ಯ ವಿರಚಿತ (ಪ್ರಮೇಯನವ ಮಾಲಿಕಾ) ಅಣುಮಧ್ವ
(ರಘುವರ್ಯಕೃತ ಸೌರಭ ಪ್ರಕಾಶಿಕಾ) ದಲ್ಲಿ ಈ ರೀತಿ ಇದೆ.

## ಅತ್ರೈವಂ ಪೂರ್ವಾಚಾರ್ಯ ಪ್ರವಾದಃ

ಕದಾಚಿದ್ದೇವಕೀದೇವೀ ದ್ವಾರಕಾಯಾಂ ಸುತಂ ಹರಿಂ ।
ಉವಾಚ ಬಾಲಲೀಲಾನಾಂ ದರ್ಶನೋತ್ಸುಕ ಮಾನಸಾ ॥ 1 ॥

ಯಶೋದಾ ಬಾಲಲೀಲಾಸ್ತೇ ವಿಲೋಕ್ಯ ಪರಮಾಂ ಮುದಂ ।
ಜಗಾಮ ಕಿಲ ತತ್ಸೈಕಾಂ ಲೀಲಾ ಮೇ ಕೃಷ್ಣ ದರ್ಶಯ ॥ 2 ॥

ಏವಂ ಮಾತ್ರಾ ಚೋದಿತೋ ದ್ವಾರಕಾಯಾಂ ಕೃಷ್ಣೋ ಭೂತ್ವಾ
ಬಾಲಕ ಕಶ್ಚಿಚಿತ್ತಾಮ್ ।
ಪ್ರಾಪಾಮಂ ದಂ ದಧಿ ಸಂಲೋಡಯಂತೀಂ
ಲೀಲಾಭಾವೈ ರಂಜಯನ್ಮಾತೃಚಿತ್ತಮ್ ॥ 3 ॥

ತದಂಕಮಾರುಹ್ಯ ಪಪೌ ಸ್ತನಂ ಸ ಸ್ತನ್ಯಂ ತದಾಸ್ಯಂ ಪ್ರಸಮೀಕ್ಷಮಾಣಃ ।
ತದಾ ತದೀಕ್ಷಾವಿವಶಾಂತರಾ ಸಾ ಸುಖಾಂಬುರಾಶೌ ವಿಜಹಾರ ದೇವೀ ॥ 4 ॥

ದಧ್ಯಮತ್ರಂ ವಿಭಜ್ಯಾಥ ನವನೀತಂ ಪೃಥಕ್ಷಯನ್ ।
ನವನೀತ ವಿಲಿಪ್ತಾಂಗೋ ಮಂದಾಸಂ ದಾಮ ಚಾಹರತ್ ॥ 5 ॥

ಕಾಲಮಲ್ಪಂ ವಿಹೃತ್ಯೈವ ಮಾಕೃತಿಂ ತಮುದಾವ್ಯದಾತ್ ।
ದೇವಕೀ ಚಾತಿಸಂತುಷ್ಟಾ ವಿಸ್ಮಿತಾ ಚಾ ಜವನ್ಮುಹುಃ ॥ 6 ॥

ತದ್ಯೈವ ಭೈಷ್ಮಿಂ ಚ ಸಮೀಕ್ಷ್ಯ ಮಾಧವಂ ಸದಾಪ್ಯನಂತಾಕೃತಿ
ದೃಷ್ಟಿಮತ್ಯಪಿ ।
ಪುನಃ ಪುನರ್ನಾತನ ಮೇತದಾಕೃತಿಂ ನಿರ್ಮಾಪಯಾಮಾಸ
ತದಾ ತದಾಕೃತಿಮ್ ॥ 7 ॥

ಜನಾನ್ವಿಡಂಬಯಂತೀ ಸಾ ನಿತ್ಯಂ ತತ್ಪ್ರತಿಮಾಗತಂ ।
ಪೂಜಯಾಮಾಸ ವಿಭವೈಃ ಸಾಕ್ಷಾತ್ತಂ ಪೂಜಯತ್ಯಪಿ ॥ 8 ॥

ಕೃಷ್ಣಾವತಾರೇಽಪ ಸಿತೇ ಫಲ್ಗುಣೋ ದ್ವಾರಕಾಸ್ಥಿತಾಮ್ ।
ಸ್ಥಾಪಯಾಮಾಸ ತಾಮರ್ಚಾಮುಕ್ತಮಾಂ ರುಕ್ಮಿಣೀವನೇ ॥ 9 ॥

ಗೋಪೀಚಂದನ ಲಗ್ನತ್ವಾದ್ಗೋಪೀಚಂದನ ಬುದ್ಧಯಃ ।
ಪ್ರತಿಮಾಂ ತಾಂ ಸಮಾಜಹ್ರುರ್ದೈವಾತ್ತಾಂ ಯಾತ್ರಿಕಾಃ ಕಲೌ ॥ 10 ॥

ರೂಪ್ಯಪೀಠಾಂತಿಕ ಗ್ರಾಮಃ ಪಾರ್ಥೋ ಭಿಸ್ಯೋಽಭವತ್ಪ್ರವಃ ।
ತದರ್ಥಸೂಚಕೇನಾವೆ ಗ್ರಾಮೋ ನಾಮ್ನಾಯುತೋಽಭವತ್ ॥ 11 ॥

ಶ್ರೇಯೋ ವಿಷ್ನೋ ವಿಘ್ನಾತಾರ್ಥಂ ಸಜ್ಜನಾನಾಂ ದಯಾಂಬುಧಿಃ
ಚಿಂತಯನ್ಸರ್ವವಿನ್ಮಧ್ವೋ ಜಗಾಮಚ ತದಂತಿಕಮ್ ॥ 12 ॥

ತತ್ರ ಮಗ್ನಾಂ ನವಪಾದಾಯ ಪ್ರತಿಮಾಲ ದ್ವಾದಶನ್ಮುತೀಃ ।
ಕುರ್ವನ್ಸ್ನಾನೀಯ ತಾಯಾಮ್ಯ ಆನ್ಧ್ವಯದನಲ್ಪಧೀಃ ॥ 13 ॥

**ಇತಿ**

ಪಾಶಮಂಥಾನ ಸಂಯುಕ್ತಂ ಯಶೋದಾಯೈ ಪ್ರದರ್ಶಿತಮ್ ।
ತದ್ರೂಪಂ ದ್ರಷ್ಟುಕಾಮಾಯೈ ಪುನರ್ಮಾತ್ರೇ ಪ್ರದರ್ಶಿತಮ್ ॥

ಕೃಷ್ಣಾಜ್ಞಯಾ ನಿರ್ಮಿತಂ ತತ್ಸ್ವರೂಪಂ ವಿಶ್ವಕರ್ಮಣಾ
ತದ್ರೂಪೇ ಭಗವಾನ್ ಕೃಷ್ಣಃ ಸ್ವಯಂವ್ಯಕ್ತೋ ಬಭೂವಹ ॥

ಇತಿ ಸ್ಕಾಂದಗತ ಸಹ್ಯಾದ್ರಿ ಖಂಡವಚನಾದ್ವ್ಯಕ್ತಿಶ್ಚ ತದಾಕೃತಿಂ ನಿರ್ಮಾಪ ಯಾಮಾಸೇತ್ಯತ್ರಪತಿಂ ಪ್ರತಿ ವಿಜ್ಞಾಪ್ಯೈತದ್ದ್ವಾರಾ ನಿರ್ಮಾಸಯಾಮಾ ನೇತ್ಯಾದಿ ಪ್ರಮೇಯ ವಿಶೇಷೋ ಬೋಧ್ಯಃ ॥

‘ಏತಸ್ಮಿನ್ನಂತರೇ ಬ್ರಹ್ಮನ್ನಾರುಹ್ಯ ಮಕರಂ ಸ್ವಯಂ । ವರುಣಸ್ತ್ವಾನ ಯಾಮಾಸ ತದ್ರೂಪಂ ನಾರದೇರಿತಃ । ” ಇತಿಪೂರ್ವೋಕ್ತ ಪುರಾಣ ವಾಕ್ಯಾತ್ತತ್ರ ಮಗ್ನಾಂ ನಮಾದಾಯೇತ್ಯತ್ರ ಸಾಕ್ಷಾದ್ವರುಣೇನ ದತ್ತಾಂ ನಮಾದಾಯೇತ್ಯರ್ಥವಿಶೇಷೋ ಭೋಧ್ಯಃ ॥

–8–

## “ ಶ್ರೀ ವಿಶ್ವೇಂದ್ರತೀರ್ಥಸ್ವಾಮಿಗಳ ಕೃತಿಗಳು ”

ರಾಗ ಖರಹರಪ್ರಿಯ – ಆದಿತಾಳ

ಬಾಭಾತಿ ಸಾ ಶಿವರೂಪ್ಯಪುರೀ । ದ್ವಾರಕೋಪಮಾನಕ
ಪುರೀ ॥ ಪ ॥ ವ್ರಜಪಾಲ ಬಾಲಾನ್ವಿತಾ । ದ್ವಿಜರಾಜ
ಮಹಾರ್ಥಾನ್ವಿತಾ ॥ ದ್ವಿಜವಾರ ಕೋಲಾಹಲಾ । ಸುಜನೈಕ
ವಾಸಾನ್ವಿತಾ ॥ 1 ॥ ಕುಂಡಿನೇಶ ಜಾರ್ಜಾನ್ವಿತಾ । ಶೌಂಡಮಧ್ವ
ಪೂಜಾನ್ವಿತಾ ॥ ಖಾಂಡವಾರಿ ಸೂತಧೃತಾ । ದಂಡಧಾಮಧರಾನ್ವಿತಾ । 2 ।
ರಾಜೇಶ ಶ್ರೀ ಹಯಮುಖ ಕಿಂಕರಾಗ್ರ್ಯಾನಂದತೀರ್ಥ ।
ರಾಜಮಾನ ಚಾರು ಚರಣ ಪಂಕಜಾತಿ ಶೋಭಮಾನ್ವಿತಾ ॥ 3 ॥

## ತೀರ್ಥಪ್ರಬಂಧಃ

ಕಾಶೀತಲೇ ಕೃತ ವದಾಸಿ ನರಿತ್ಸುರಾಣಾ –
ಮಾಯಾತ ಯದ್ಗತ ಪವಿತ್ರ ನರೋಽಧುನಾಪಿ ।।
ರುದ್ರಾದಿದೇವಗಣಸೇವಿತೆ ಸರ್ವಭಾಗಂ
ತದ್ರಾಪ್ಯಪೀರವುರಪುಪ್ರತಿಪುಂ ತ್ರಿಲೋಕ್ಯಾಂ ।।

ಯಸ್ಮಿನ್ಸ್ವಾಗ್ವಜ್ರದಾರಾಃ ಧುರಿತಕುಲ ಮಹಾತೂಲದಾಹೇತಿಶೂರಾಃ ।
ದಂಡ ಪ್ರೋದ್ಭಾಸಿ ಹಸ್ತಾಃ ಸ್ಫುರದಸಿಸಮ ಸನ್ಮಾರ್ಗಸಕ್ತಾಃ ಸಮಸ್ತಾಃ
ಶ್ರೀಕೃಷ್ಣಸ್ನೇಹಪಾಶಾಃ ಶ್ರಮಹರಗತಯಃ ಶಾಂತಿಭಾಜೋವಿರಕ್ತಾಃ ।।
ಯೋಗೀಂದ್ರಾಶ್ಚಿತ್ರ ಲೋಕಾಧಿಪನಿಭ ವಿಭವಾಃ ಮಧ್ವದಾಸಾ ಜಯಂತಿ ।।

ಧ್ವಾರವತೀಂ ಸಕಲ ಭಾಗ್ಯವತೀಂ ಉತಪೇಕ್ಷ್ಯ
ಗೋಪಾಲಬಾಲಲಲನಾಕರ ಪೂಜನಂಚ ।।
ಪಾರ್ಥಿಂ ವಧೂಗ್ಗೃಹಮತೀತ್ಯ ಸಮ ಧ್ವನಾಥೋ
ಯತ್ರಾಸ್ತಿ ತದ್ರ ಜತಪೀರಪ್ಪುರಂ ಗರಿ ಯಃ ।।

ರೂಪಾತ್ಮಕಸ್ಯ ಭವಸ್ತುಲಸಾಂ ನ ಭೇಜುಃ
ಕ್ಷೇತ್ರಾಣಿ ಭಾರತಮಹೀರಚಿತಾನ್ಯ ಮೂನಿ ।।
ಈಶಾಚಲಂ ಚ ಜಯಮೀಶ್ವರ ಮಾತ್ರಪಾಸಂ
ಶ್ರೀಮಧ್ವ ಹಸ್ತಕಮಲಾರ್ಚಿತ ಕೃಷ್ಣಮೂರ್ತ್ಯಾ ।।

ನಿರ್ಮಥ್ಯೋಗ್ರಭವಾರ್ಣವೇ ನಿಜಮನೋಽ
ಭೀಷ್ಟಂ ದಿಶಾಮೀತಿ ಯಃ ।।
ಸಮ್ಯಗ್ ಜ್ಞಾಪಯಿತುಂ ಕರೇಣ
ವಿಲಸನ್ಮಥಾನಮನ್ಯೇನ ಚ ।।

ರಮ್ಯಂ ದಾಮಧದನ್ ಮಹೇಶ
ರಜತಗ್ರಾಮ ಶ್ರಿಯೋಽಲಂಕೃತಿಃ ।
ಕರ್ಮಂದೀಶ್ವರ ಭಕ್ತಿ ಬಂಧನವಶಃ
ಪ್ರೀತೋಽಸ್ತು ಕೃಷ್ಣ ಪ್ರಭುಃ ।।

ಚಾಂಚಲ್ಯಂ ಪ್ರಪ್ಯದೇಶೇ ಕರಿನಕ್ಯತಿರಥೋ
ವಕ್ರಾತಾ ಕ್ವಾಪಿ ಕೋಪೋ ।
ಯಾಚ್ಞಾ ಕಸ್ಮಾದಕಸ್ಮಾದಪಕೃತಿ
ರುಪಕಾರಿಶ್ವಪಿ ಪ್ರಾಜ್ಞ ಮೌಲೇ ।।

ಸ್ತ್ರೃರ್ಥೇನ್ಯ ಸ್ತ್ರೀಪ್ಸವಚ್ಛ್ವಾ ಕಿಮಿತಿ
ರಮಣ ತೇ ಚೋರತಾ ಮಾಯಿಕತ್ವಂ ।
ಚಿತ್ರಂ ರೋಹಾವರೋಹಾವಿತಿ
ವಿರಸಣಿರಾವ್ಯಾಪೃತಃ ಪಾತು ಕೃಷ್ಣಃ ॥

ರೂಪ್ಯಾತ್ಮಕಾಪುರಪ್ಪುರಸ್ಸರಸನ್ನಿರೂಪ್ಯ
ರೂಪ್ಯಾತ್ಮಕಂ ಚ ಭವತಃ ಕೃಪಯಾ ಗತಸ್ಯ ।
ರೂಪ್ಯಾತ್ಮಕಾಲಯು ಕೃತಾಲಯತ್ತ್ವಮೇವ
ರೂಪ್ಯಾತ್ಮನೋ ಗತಿರಿಹಾಪಿ ತದೀಶ ಪಾಹಿ ॥

ಶಿವಾಂತರ್ಯಾಮಿತಾಂ ಸ್ವೀಯಾಂ ಪ್ರಿಯಾನ್ ಪ್ರತಿ ನಿಬೋಧಯನ್ ।
ದಯಾವಾರಿನಿಧಿಶ್ಯೈವೀಂ ಶಿಲಾಮಾಶ್ರಿತ್ಯ ಶೋಭತೇ ॥
ಈಶಸ್ಯಾಹೀಶಪದವೀಂ ಭಾವಯನ್ನಿವ ಭಾವನೀಮ್
ಅಧ್ಯಾಸ್ತೇ ಶೇಷಶಯನಃ ಸ್ನಿಗ್ಧಾಂ ಲಿಂಗಶಿಲಾಂ ಹರಿಃ

## ದ್ವಾದಶ ಸ್ತೋತ್ರಂ : (ದ್ವಾದಶೋಧ್ಯಾಯ)

ಆನಂದ ಮುಕುಂದ ಅರವಿಂದನಯನ ।
ಆನಂದತೀರ್ಥಪರಾನಂದ ವರದ ॥ ೧ ॥

ಸುಂದರೀ ಮಂದಿರ ಗೋವಿಂದ ವಂದೇ ।
ಆನಂದತೀರ್ಥಪರಾನಂದ ವರದ ॥ ೨ ॥

ಚಂದ್ರಸುರೇಂದ್ರ ಸುವಂದಿತ ವಂದೇ ।
ಆನಂದತೀರ್ಥಪರಾನಂದ ವರದ ॥ ೩ ॥

ಚಂದ್ರಕಮಂದಿರ ನಂದಕ ವಂದೇ
ಆನಂದತೀರ್ಥಪರಾನಂದ ವರದ ॥ ೪ ॥

ವೃಂದಾರಕ ವೃಂದ ಸುವಂದಿತ ವಂದೇ ।
ಆನಂದತೀರ್ಥಪರಾನಂದ ವರದ ॥ ೫ ॥

ಮಂದಾರಸೂನ ಸುಚರ್ಚಿತ ವಂದೇ ।
ಆನಂದತೀರ್ಥಪರಾನಂದ ವರದ ॥ ೬ ॥

ಇಂದಿರಾನಂದಕ ಸುಂದರ ವಂದೇ ।
ಆನಂದತಿರ್ಥಪರಾನಂದ ವರದ ॥ ೭ ॥

ಮಂದಿರ ಸ್ಯಂದನ ಸ್ಯಂದಕ ವಂದೇ ।
ಆನಂದತೀರ್ಥಪರಾನಂದ ವರದ ॥ ೨ ॥

ಆನಂದ ಚಂದ್ರಿಕಾ ಸ್ಪಂದಕ ವಂದೇ ।
ಆನಂದತೀರ್ಥಪರಾನಂದ ವರದ ॥ ೯ ॥



---

**ಶಬ್ಧಕೋಶ :**

| | |
|---|---|
| ಅಘ | ಪಾಪ |
| ಅನವದ್ಯ | ದೋಷವಿಲ್ಲದವನು |
| ಅಪವರ್ಗ | ಭೂಲೋಕ |
| ಅಬ್ದಿಜೆ | ಸಮುದ್ರದಲ್ಲಿ ಹುಟ್ಟಿದವಳು –ಲಕ್ಷ್ಮಿ |
| ಅಲವಬೋಧಮುನಿ | ಮಧ್ವಾಚಾರ್ಯರು |
| ಅಳಿಯುಕೂದಲು | ದುಂಬಿಯಂತೆ ಕಪ್ಪಾದ ಕೂದಲು |
| ಉರ್ವಿ | ಭೂಮಿ |
| ಓದನ | ಅನ್ನ |
| ಕಂದರ್ಪಪಿತ | ಮನ್ಮಥನ ತಂದೆ; ವಿಷ್ಣು |
| ಖದ್ಯೋತ | ಮಿಂಚುಹುಳ. ಸೂರ್ಯ |
| ಗುಡ | ಬೆಲ್ಲ |
| ಗುಣತ್ರಯಾತ್ಮಕ | ಮೂರುಗುಣ ಉಳ್ಳದ್ದು (ಸಾತ್ವಿಕ, ತಾಮಸ, ರಾಜಸ) |
| ಗಾಂಗೇಯುಚೇಲ | ಬಿಳಿಯುಬಟ್ಟೆ |
| ಘನಣ | ತೊಂದರೆ |
| ಜಡಜಮಾರ್ಗಣ | ಕಮಲದ ಹೂವನ್ನು ಬಾಣವಾಗುಳ್ಳವನು ಮನ್ಮಥ |
| ಚಾನೂರು | ಮಂಡಿ ಮತ್ತು ತೊಡೆ |
| ಜಿಷ್ಣು | ಗೆದ್ದವನು |
| ತಕ್ರ | ಮಜ್ಜಿಗೆ |
| ತಿಗ್ಮ | ತೀಕ್ಷ್ಣ |
| ತಿಲಾಂಶ | ಎಳ್ಳಿನಷ್ಟು |
| ತುಡು | ಕದ್ದು |
| ತ್ರ್ಯಕ್ಷ | ಈಶ್ವರ |

| | |
|---|---|
| ತ್ರಿದಶ | ದೇವತೆ |
| ದಾಮ | ಡಾಬು, (ಸೊಂಟಕ್ಕೆ ಹಾಕಿಕೊಳ್ಳುವ ಆಭರಣ) ಹಗ್ಗ |
| ದುಗ್ಧಾಬ್ಧಿ | ಹಾಲಿನ ಸಮುದ್ರ |
| ನಾಕ | ಸ್ವರ್ಗ |
| ನಾಗಾರಿ | ಹಾವಿನ ಶತ್ರು ಗರುಡ |
| ನಿರಯ | ನರಕ |
| ನೀರದವರ್ಣ | ಮೋಡದ ಬಣ್ಣ |
| ನೇಣು | ಹಗ್ಗ |
| ಪಡುವಲಾಬ್ಧಿ | ಪಶ್ಚಿಮ ದಿಕ್ಕಿನ ಸಮುದ್ರ |
| ಪರಂಜಳ | ಪ್ರಜ್ವಲ |
| ಪಯೋಬ್ಧಿತನುಜೆ | ಲಕ್ಷ್ಮಿ |
| ಪಾದಪುಂಡರೀಕಂ | ಬಿಳಿಯ ತಾವರೆಯಂತೆ ಪಾದ ಉಳ್ಳವನು |
| ಪಾವಮಾನಿಯ ಮತ | ಮಧ್ವ ಮತ |
| ಪೀಯೂಷ | ಅಮೃತ |
| ಫುಲ್ಲಸಂಭವ | ಬ್ರಹ್ಮ |
| ಪೃಥುಕ | ಅವಲಕ್ಕಿ |
| ಪೈಥುಲ | ದೊಡ್ಡದಾದ |
| ಪೈಜಣ | ಗೆಜ್ಜೆ |
| ಪೋತ | ಬಾಲಕ |
| ಪ್ಲವ | ತೇಲು |
| ಬಿಡಾಲ | ಬೆಕ್ಕು |
| ಬಿಸಜಾಕ್ಷ | ಕಮಲಾಕ್ಷ, ವಿಷ್ಣು |
| ಬಿಂಬಮೂರುತಿ | ಜೀವದಲ್ಲಿರುವ ಭಗವನ್ಮೂರ್ತಿ |
| ಭವಾರ್ಣವ | ಜನ್ಮಗಳೆಂಬ ಸಮುದ್ರ |
| ಮಾತರಿಶ್ವ | ವಾಯು ದೇವರು |
| ಮಾರಮಣ | ಲಕ್ಷ್ಮೀಪತಿ |
| ಮಾರಾಂತ | ಮನ್ಮಥನನ್ನು ಕೊನೆಗಾಣಿಸಿದವನು ಈಶ್ವರ |
| ಮಿನುನಿ | ಚಿನ್ನ |
| ಮುಟ್ಟಲಮ್ಮರು | ಮುಟ್ಟಲಾರರು |
| ಮೇದಿನಿ | ಭೂಮಿ |
| ಮಂಡೆ | ತಲೆ |
| ಮುಂದಜ | ಕಮುದಿ |
| ಮುಂಜಜಾಸನ | ಬ್ರಹ್ಮ |

| | |
|---|---|
| ರಜ್ಜು | ಹಗ್ಗ |
| ರುಗ್ಮ | ಬಂಗಾರ |
| ಲಾಜ | ಅರಳು |
| ವಿಧೃತೆ | ಹೊಂದಿದ |
| ವೀತಶೋಕ | ದುಃಖವಿಲ್ಲದಿರುವನು |
| ವ್ರಜ | ಗುಂಪು, ಗೋಕುಲ |
| ಶಕಟ | ಬಂಡಿ (ಶಕಟಾಸುರ) |
| ಸಲಿಲ | ನೀರು |
| ಸುಖತೀರ್ಥ | ಆನಂದತೀರ್ಥ |
| ಸುರಪ | ಇಂದ |
| ಸುಷುಪ್ತಿ | ನಿದ್ದೆ |
| ಸುಷ್ಟು | ಅತ್ಯುತ್ತಮ |
| ಸಂಗಾಡಿ | ಬಿಲ್ಲು |
| ಸಿಂಧುಶಯನ | ಸಮುದ್ರದಲ್ಲಿ ಮಲಗಿರುವವನು, ವಿಷ್ಣು |
| ಹರಿದಿನ | ಏಕಾದಶಿ |



**ಅನುಬಂಧ : 2**

## ಸಹಾಯಕ ಸಾಹಿತ್ಯ

1 ಪುರಂದರದಾಸರ ಸುಳಾದಿಗಳು (ಸಂ) ಮಾಪಂಜೆ ಗುರುರಾವ್ ಉಡುಪಿ (1927)

2 ಶ್ರೀ ಆದ್ಯರಾದಿ ಹರಿದಾಸರ ಪದ ಸುಳಾದಿಗಳು (ಸಂ) ಹನುಮಂತರಾವ್ ಗೋರಬಾಳ (?)

3 ಶ್ರೀ ವಾದಿರಾಜರ ಕೃತಿಗಳು (ಸಂ) ಡಾ॥ ಟಿ ಎನ್ ನಾಗರತ್ನ ಕನ್ನಡ ಅಧ್ಯ) ಅಧ್ಯಯನ ಸಂಸ್ಥೆ ಮೈಸೂರು (1980)

4 ಶ್ರೀ ಪಾದರಾಜರ ಕೃತಿಗಳು (ಸಂ) ಡಾ॥ ಜಿ ವರದರಾಜರಾವ್ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು (1973)

5 ಶ್ರೀ ಗೋಪಾಲದಾಸರ ಕೃತಿಗಳು (ಸಂ) ಡಾ॥ ಟಿ. ಎನ್. ನಾಗರತ್ನ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (1977)

6 ಶ್ರೀ ವಿಜಯದಾಸರ ಪದಗಳು ಭಾಗ–1, 2 (ಸಂ) ಶ್ರೀ ಗೋರಬಾಳಹನುಮಂತರಾವ್ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ ಲಿಂಗಸುಗೂರು (1953 1955)

7 ಶ್ರೀ ವಿಜಯದಾಸರ ತೀರ್ಥ ಕ್ಷೇತ್ರ ಮಹಿಮಾ ಸುಳಾದಿಗಳು (ಸಂ) ಶ್ರೀ ಹರಿದಾಸರತ್ನ ಗೋಪಾಲದಾಸರ ಸಂಗ್ರಹದಿಂದ (1659)

8 ಶ್ರೀ ಪುರಂದರದಾಸರ ಸಾಹಿತ್ಯ–4 ಕೃಷ್ಣಲೀಲೆ (ಸಂ) ಶ್ರೀ ಕೃಷ್ಣಶರ್ಮಾ ಬೆಟಗೇರಿ, ಶ್ರೀ ಹುಚ್ಚುರಾವ್ ಬೆಂಗೇರಿ. ಶ್ರೀ ಪುರಂದರ ದಾಸರ 400ನೆಯ ವರ್ಷದ ಉತ್ಸವ ಮಂಡಲ ಧಾರವಾಡ (1965)

9 ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು (ಸಂ) ಡಾ|| ಎ ಟಿ ಪಾಟೀಲ ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ (1956)

10 ಕನಕದಾಸರ ಕೀರ್ತನೆಗಳು (ಸಂ) ಡಾ|| ಕ, ಎಂ ಕೃಷ್ಣರಾವ್ ಮತ್ತು ಶ್ರೀ ಶಿವಮೂರ್ತಿಶಾಸ್ತ್ರಿ, ರಾಜ್ಯಸಮಿತಿ–ಶ್ರೀ ಕನಕದಾಸರ 4ನೆಯ ಶತಮಾನೋತ್ಸವ ಮೈಸೂರು ಸರ್ಕಾರ ಬೆಂಗಳೂರು(1965)

11 ಶ್ರೀ ಜಗನ್ನಾಥದಾಸರ ಕೃತಿಗಳು (ಸಂ) ಡಾ|| ಕೆ ಎಂ ಕೃಷ್ಣರಾವ್, ಸಿಂಧು ಶಯನ ಪ್ರಕಾಶನ 371 3ನೇ ಬ್ಲಾಕ್ ಜಯನಗರ ಬೆಂಗಳೂರು (1981)

12 ಶ್ರೀ ಜಗನ್ನಾಥದಾಸರ ಕೃತಿಗಳು (ಸಂ) ಡಾ|| ಕೆ ಎಂ ಕೃಷ್ಣರಾವ್, ಸಿಂಧು ಶಯನ ಪ್ರಕಾಶನ, 371 ಮೂರನೆಯ ಬ್ಲಾಕ್ ಜಯನಗರ, ಬೆಂಗಳೂರು (1981)

13 ವ್ಯಾಸರಾಯರ ಹಾಡುಗಳು (ಸಂ) ಕಾವ್ಯಪ್ರೇಮಿ, ಸಮಾಜ ಪುಸ್ತಕಾಲಯ ಧಾರವಾಡ (1983)

14 ಸ್ವಂತ ಸಂಗ್ರಹ ಹಸ್ತಪ್ರತಿಗಳು

15 ಡಾ|| ಜಿ ವರದರಾಯರು ಕಳುಹಿಸಿಕೊಟ್ಟ ವರದಕೇಶವದಾಸರ ಒಂದುಸುಳಾದಿ

16 ಉಡುಪಿ ಸೋದೆ ಮಠಾಧೀಶರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರು ಕಳುಹಿಸಿದ ಸಂಸ್ಕೃತ ಕೃತಿಗಳು

17 ಚಿಕ್ಕೇರೂರು ಗೋವಿಂದಾಚಾರ್ಯರು ಕಳುಹಿಸಿದ ಹರವನಹಳ್ಳಿ ಭೀಮವ್ವನವರ ಕೃತಿಗಳು

18 ಸುರತ್ಕಲ್‌ನ ವಿ॥ ವೆಂಕಟರಾಯಾಚಾರ್ಯರು ಕಳುಹಿಸಿದ ವಾದಿರಾಜರ ಕೃತಿಗಳು ತುಘಾಕಿ ವೆಂಕಟರಮಣಾಚಾರ್ಯರ ಕೃತಿಗಳು  ಗುರುಗೋವಿಂದವಿಠಲದಾಸರ ಕೃತಿಗಳು ಇತ್ಯಾದಿ

19 ಪ್ರೊ॥ ಎಂ. ರಾಜಗೋಪಾಲಚಾರ್ಯರು ಕಳಿಸಿಕೊಟ್ಟ ಶ್ರೀ ವಾದಿರಾಜರ ಕೃತಿ " ಎಂದೆಂದುಡುಪಿಲಿ ನಿಂದಸ "

20 ಉಡುಪಿ ಪೇಜಾವರ ಮಠದ  ಉಡುಪಿ ಇತಿಹಾಸ ವರ್ತಮಾನ (ಬನ್ನಂಜೆ ಗೋವಿಂದಚಾರ್ಯರ ಕೃತಿ) ಫಲಿಮಾರು ಮಠದವರ ಹಿಂದಿನ ಪುಸ್ತಕಗಳು ಮತ್ತು ಎ॥ ಕೂರಟ್ಕರ್ ಶ್ರೀನಿವಾಸರಾಯರ  ನಮ್ಮ ಉಡುಪಿ" ಯಿಂಬ ವಿವರಗಳನ್ನು ಸಂಗ್ರಹಿಸಲಾಗಿದೆ.

21 ಶ್ರೀ ಕೂರಟಿ ಶ್ರೀನಿವಾಸರಾಯರ "ಶ್ರೀ ಮಧ್ವಾಚಾರ್ಯರು"

22 ಬೇಲೂರಿನ ಶ್ರೀ ಕೆ ಶ್ರೀಧರ ಹತ್ವಾರರಿಂದ  ಉಡುಪಿ ಕೃಷ್ಣ ಪೊಡವಿಗೊಡೆಯ"



= ಸಮಾಪ್ತಿ =



# ತಿದ್ದುಪಡಿ

**ಪೀಠಿಕೆ :**

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| | 15 | ಐಹಿಕಾಮುಷ್ಟಿಕ | ಐಹಿಕಾಮುಷ್ಮಿಕ |
| | 5 | ಪ್ರಭಾವಕ್ಕೊಳಗಾದವರು | ಪ್ರಭಾವಕ್ಕೊಳಗಾದವರು |
| | 25 | ಕೃಷ್ಣನ | ಕೃಷ್ಣನ |
| | 29 | ವರಕೇಶವಾಂಕಿತೆ | ವರದಕೇಶವಾಂಕಿತ |
| 4 | 31 | ತೌಳವದೆಶಕ್ಕೆ | ತೌಳವದೇಶಕ್ಕೆ |
| 4 | 32 | ನೆಲೆದೊಳೆಸಿದನು | ನೆಲೆಗೊಳಿಸಿದನು |
| 5 | 3 | ಬಲ್ಲಾಳಂ ಪಂಡಿತ | ಬಲ್ಲಾಳ ಪಂಡಿತ |
| 7 | 7 | ಹೆಜ್ಜಲಿನು | ವೆಪ್ಪಲಿನು |
| 7 | 14 | ಈ ಶಾವಾಶ್ಯೋಪನಿಷತ್ತಿನಲ್ಲಿ | ಈಶಾವಾಸ್ಯೋಪನಿಷತ್ತಿನಲ್ಲಿ |
| 8 | 24 | ಹರೇರಪುಚರಾ | ಹರೇರನುಚರಾ |
| 8 | 24 | ನೀಚೋಚ್ಚಭಾವಂಗತಾ | ನೀಚೋಚ್ಚ ... |
| 11 | 1 | ಖಣ | ಖಣಿ |
| 11 | 24 | ತಾರತಮ್ಯತೆನ | ತಾರತಮ್ಯತ್ವೇನ |
| 12 | 22 | (ಗೋಪೀತಲಾಪ) | (ಗೋಪೀತಲಾಬ್) |
| 13 | 25 | ತ್ರೀಣ್ಯದಿತಾನಿ | ತ್ರೀಣ್ಯುದಿತಾನಿ |
| 14 | 18 | ವಾನಶಿಷ್ಯೋ | ವ್ಯಾನಶಿಷ್ಯೋ |
| 14 | 21 | ದ್ವಾದಶಕಂ | ದ್ವಾದಶಕಂ |
| 15 | 1 | ವರ್ಷವಲ್ಲಿ | ವರ್ಷಗಳಲ್ಲಿ |
| 25 | 7 | ಶ್ರೀಮಧ | ಶ್ರೀಮಧ್ವ |
| 27 | 17 | ಮರವೃದೆಂದು | ಮರವುದೆಂದು |
| 28 | 14 | ಪ ದಗಳ | ಪದಗಳ |
| 39 | 5 | ಮೊರ್ಭನವಪ್ಪ | ಮೂರ್ಭನವಪ್ಪ |
| 43 | 7 | ಇವರಾ | ಇವರು |
| 47 | 16 | ಹದುಳದೆ | ಹದುಳವೆ |
| 47 | 16 | ಕ್ಲೋಶವು | ಕ್ಲೇಶವು |
| 49 | 18 | ಭಾರ್ಗವಕ್ಷೇತ್ರದಲಿದಕೆಲ್ಲ | ಭಾರ್ಗವ ಲಿದಕೆಲ್ಲಿ |

# ತಿದ್ದುಪಡಿ

**ಪೀಠಿಕೆ :**

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| 49 | 22 | ನಮ್ರೊ | ನಮ್ರ |
| 50 | 15 | ಶ್ರಧ್ಣೆಯಿಲ್ಲದೆ | ಶ್ರದ್ಧೆಯಿಲ್ಲದೆ |
| 50 | 24 | ವರ್ಷಗರೆವುರಿದಕೊ | ವರ್ಷಗರವುದಿದಕೂ |
| 50 | 25 | ನರ್ವಜಾವೆಗೆ | ಸರ್ವಜಾತಿಗೆ |
| 50 | 27 | ನುಧನ | ಸಾಧನ |
| 51 | 11 | ಬರಲ | ಬರಲು |
| 51 | 6 | ದೋಷಿನಲೇಸಹುದೊ | ದೋಷಿಸಲೇನಹುದೊ |
| 52 | 4 | ಲೋಕಮಲನದ | ಲೋಕಮಲಿನದ |
| 61 | 18 | ಎನ್ನತ | ಎನ್ನತ್ತ |
| 63 | 5 | ನೂರಕಲ್ಪ | ನೂರುಕಲ್ಪ |
| 64 | 24 | ಭಾವಕಿಯೊಡ | ಭಾವಕಿಯರೊಡನಾಡುವ |
| 66 | 19 | ಚೆಲುವ ನಿವ | ಚೆಲುವನಿವ |
| 70 | 17 | ವುರಾಣವನು | ಪುರಾಣವನು |
| 71 | 17 | ಸುವರ್ಣ ಕಾಂಡಲ | ಸುವರ್ಣ ಕುಂಡಲ |
| 74 | 7 | ಸೂರ್ಯನ ತಿಪೆರ್ಮೆಯಿಂ | ಸೂರ್ಯನತಿ ಪೆರ್ಮೆಯಿಂ |
| 80 | 5 | ಇಂದಿಕಿಯೊಪ್ಪುವ | ಇಂದಿರೆಯೊಪ್ಪುವ |
| 82 | 17 | ಮಂಗಳಾಗ | ಮಂಗಳಾಂಗ |
| 83 | 20 | ಸಿತ್ಯದಲಿ | ನಿತ್ಯದಲಿ |
| 84 | 22 | ನಿಷ್ವ | ನಿಷ್ಟ |
| 96 | 18 | ಬುಜಯುಗ | ಭುಜಯುಗ |
| 107 | 2 | ವಿನದಿ | ದಿನದಿ |
| 107 | 4 | ಮೂಲಕಾರಣದನ್ನೆ | ಮೂಲಕಾರಣವನ್ನೆ |
| 120 | 33 | ನಾರಿ | ಸಾರಿ |
| 122 | 33 | ಸ್ತೋತ್ರೆ | ಸ್ತೋತ್ರೆ |
| 125 | 5 | ನೋಳ್ವ | ನೋಳ್ಪ |

| ಪುಟ | ಸಾಲು | ಇರುವುದು | ಇರಬೇಕಾದ್ದು |
|---|---|---|---|
| 128 | 17 | ಉರ್ಪ್ರಿಯೊಳು | ಉರ್ವಿಯೊಳು |
| 129 | 6 | ಕೃಷ್ಣ | ಕಷ್ಟ |
| 131 | 23 | ವತ್ತುವನೆ | ಪೆತ್ತುವನೆ |
| 135 | 22 | ಹಯುವನಿಂದುಡುನ | ಹಯುವದನನಿಂದುಡುಪಿನ |
| 136 | 1 | ದುುಷ್ಟಿ | ಮುಷ್ಟಿ |
| 144 | 3 | ಪನ್ನ | ಘನ್ನ |
| 151 | 4 | ರಾದುಭೋಜನೆಂಬೊ | ರಾಮಬೋಜನೆಂಬೊ |
| 154 | 11 | ಶೊಲಗಲಾ | ತೊಲಗಲಾ |
| 158 | 9 | ಮೂಜಗವ | ಮೂಜಗದ |
| 164 | 6 | ಪರಿತಃ | ಪರಿತಃ |
| 164 | 15 | ತ್ರಂಬಕ | ತ್ರ್ಯಂಬಕ |
| 164 | 25 | ಬಿಕ್ಷುಶ್ಲಾಪ್ಯಾಯು | ಭಿಕ್ಷುಶ್ಲಾಘ್ಯಾಯ |
| 165 | 2 | ವಾದಿರಾಚೋಕ್ತ | ವಾದಿರಾಜೋಕ್ತ |
| 165 | 12 | ಸ್ಬರಿತ | ಸ್ಫುರಿತ |
| 166 | 3 | ನಿಶೇಷಬಿಂಬ | ವಿಶೇಷಬಿಂಬ |
| 169 | 12 | ಸಮ ದ್ವಸಾಥೊ | ಸುಮಧ್ವನಾಥೂ |
| 169 | 12 | ವದೂಗ್ರಹಮತೀತ್ಯ | ವಧೂಗ್ರಹಮತೀತ್ಯ |
| 170 | 17 | ವರದೆ | ವರದ |
| 171 | 16 | ಗುಣರ್ರಯಾತ್ಮಕ | ಗುಣತ್ರಯಾತ್ಮಕ |
| 172 | 32 | ಕಮದಿ | ಕಮಲ |
| 173 | 10 | ಸುರಪಿ | ಸುರಪ |
| 173 | 10 | ಇಂದ | ಇಂದ್ರ |



# ತಿದ್ದುಪಡಿ ಮುಂದುವರೆದಿದ್ದು

| ಪುಟ | ಸಾಲು | ತಪ್ಪು | ಸರಿ |
|---|---|---|---|
| 43 | 22 | ಚಳುಕಲು | ಬಳುಕಲು |
| 44 | 16 | ವಡುಗಡಲ ತಡಿಯುಪಿಯಲಡಗಿರೆ | ಪಡುಗಡಲ ತಡಿಯು ಉಡುಪಿಯುಲಡಗಿದರೆ |
| | 16 | ಅವತಾರ | ಅಟ್ಟತಾಳ |
| 45 | 10 | ಕಪ್ಣಾ | ಕೃಷ್ಣಾ |
| 53 | 7 | ಧನ್ಯನಾದನೊ | ಧನ್ಯನಾದೆನೊ |
| 57 | 13 | ಮುದ್ದು ಮುಖದ | ಮುದ್ದು ಮುಖದ |
| 60 | 10 | ಸಾರ್ಥ | ಸಾರ್ಥಕ |
| 62 | 19 | ಪತಕೋಟಿ | ಶತಕೋಟಿ |
| 64 | 5 | ವುಸ್ತಕದ | ಮಾಸ್ತಕದ |
| | 17 | ನಿರ್ಮಲ ಕಾಯು | ನಿರ್ಮಲ ಕಾಯು |
| | 24 | ಬಾಪಕಿಯರ ಒಡನಾಡುವ | ಬಾಲಕಿಯರೊಡನಾಡುವ |
| 67 | 15 | ಪ್ರಪಂಡ | ಪ್ರಚಂಡ |
| 69 | 20 | ಉತ್ಸವದಲಾಹ್ವೀನ | ಉತ್ಸವದಲಾಹ್ವೀಕವ |
| 71 | 13 | ಜಾರು | ಚಾರು |
| 78 | 3 | ವುರರನ್ನು | ವರರನ್ನು |
| | 11 | ತಿಂದು | ತಿಂದ |
| 81 | 25 | ವಿರೋಚನ | ವಿಲೋಲನ |
| 83 | 12 | ಯುಂದ | ಯುಂದ |
| | 20 | ಸಿತ್ತದಲಿ | ನಿತ್ಯದಲಿ |
| 85 | 23 | ತಾಂಡವ ಮಾಡಿದ | ತಾಂಡವಮಾಡಿದ |
| 87 | 11 | ವಲ್ಲಿಳವೂಳೆನಂದುಗೆ | ಪಲ್ಲಳವೂಳೆವಂದುಗೆ |
| 93 | 3 | ಧುರಿತವಾರುಧಿ | ಧುರಿತವಾರಿಧಿ |
| | 28 | ಪುರಂದವಿಠಲ | ಪುರಂದರವಿಠಲ |
| 96 | 11 | ವೇರೆವ | ಮೆರೆವ |
| | 23 | ಪ್ರೊಳೆವ | ಪೊಳೆವ |
| 98 | 2 | ಅಕ್ಷಯಾಂಬರಪಿತ್ತನ | ಅಕ್ಷಯಾಂಬರವಿತ್ತನ |
| | 15 | ರುಜ್ಜುಪ | ರಜ್ಜುವ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| 100 | 12 | ವೃಟ್ಟ | ಪುಟ್ಟಿ |
| 101 | 21 | ಬೆಣ್ಣೆಯನಾ | ಬೆಣ್ಣೆಯನು |
| 107 | 4 | ಮೂಲಕಾರಣದನ್ನೆ | ಮೂಲಕಾರಣವನ್ನೆ |
| 109 | 16 | ಧಂಡಪಾಶವರನು | ದಂಡಪಾಶಧರನು |
| | 11 | ಪರಮುಷಿಗಳೆಲ್ಲರು | ವರಋಷಿಗಳೆಲ್ಲರು |
| 110 | 7 | ಹಯವದನ್ನ | ಹಯವದನನ್ನ |
| 114 | 12 | ನಿರ್ವ್ಯಾಜ್ಯದಲಿ | ನಿರ್ವ್ಯಾಜದಲಿ |
| | 20 | ಇರುಲಿನ್ನು | ಇರಲಿನ್ನು |
| 123 | 4 | ಚೆಲುವ | ಚೆಲುವನ |
| 125 | 16 | ಪ್ರಾತ್ರಃಕಾಲದಿ | ಪ್ರಾತಃಕಾಲದಿ |
| 126 | 14 | ತುತುವರಿಗೆ | ತುತಿವರಿಗೆ |
| | 15 | ಮೆರವ | ಮೆರೆವ |
| 128 | 2 | ದೋಷನಾಶಿನ | ದೋಷನಾಶನ |
| 129 | 6 | ಕೃಷ್ಣ | ಕಷ್ಟ ? |
| 130 | 26 | ಕುಲಾಯಿ | ಕುಲಾವಿ |
| | 29 | ಧೃಢವಾದ | ದೃಢವಾದ |
| | 30 | ಕಡೆಗೆಣ್ಣ | ಕಡೆಗಣ್ಣ |
| 131 | 23 | ಉರೊಳಗೆ | ಊರೊಳಗೆ |
| | 23 | ಪತ್ತವನೆ | ವತ್ತವನೆ |
| | 25 | ಇಂದುಮುಖವರ | ಇಂದುಮುಖಿಯರ |
| 134 | 9 | ಅಚ್ಚ ಮಲ್ಲಿ ತುಳಸಿಮಾಲೆ | ಅಚ್ಜ ಮಲ್ಲಿಗೆ ತುಳಸಿಮಾಲೆ |
| | 31 | ಧನುಮ | ಧ್ವನುಮ |
| 135 | 2 | ಭುಕುತರವರಾಧವ | ಭಕುತರವರಾಧವ |
| 137 | 12 | ಕಂಡುಕರಣವ | ಕಂಡುಕರುಣವ |
| | 14 | ಮರೆತಿಯೆನೂ | ಮರತಿಯೇನೊ |
| 138 | 25 | ವೀರ್ಯಾಪಕಟೆಯ | ವೀರ್ಯಾಪಕಡೆಯ |
| 139 | 13 | ಪಟ್ಟುವೋಗೊದಲ್ಲಡೆ | ಪುಟ್ಟುಪೋಗೋದಲ್ಲದೆ |
| 140 | 13 | ದುಃವಾರ್ತೆಯ | ದುರ್ವಾರ್ತೆಯ |
| 143 | 11 | ಯದುರವರನೆ | ಯದುವರನ |
| 144 | 3 | ಪನ್ನ | ಘನ್ನ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| | 26 | ಜಗತಾತಾ | ಜಗತ್ರಾತಾ |
| 149 | 5 | ಪ್ರಸಿಧ್ಧ | ಪ್ರಸಿದ್ಧ |
| 150 | 6 | ಕ್ಷತಿಯೊಳಗೆ | ಕ್ಷಿತಿಯೊಳಗೆ |
| | 19 | ದೂರುತಿ | ಮೂರುತಿ |
| 151 | 3 | ಮೆರವ | ಮೆರೆವ |
| 151 | 3 | ಸ್ತುತಿಗಳಿಂದ | ಸ್ತುತಿಗಳಿಂದ |
| | 4 | ರಾದುಭೋಜನಿಂದ | ರಾಮಭೋಜನಿಂದ |
| 152 | 13 | ಎಂದೆನಿಸಿಸು | ಎಂದೆನಿಸಿತು |
| | 30 | ವರನೀವ್ರತ | ವರವನೀವ್ರತ |
| 153 | 18 | ವಿಜಯಎರ್ಠಲರೇಯ | ವಿಜಯವಿರ್ಠಲರೇಯ |
| | 22 | ದುಗ ರಮಣ | ದುರ್ಗಾರಮಣ |
| 154 | 1 | ಅವಕಚ್ಚಪ | ಆವಕಚ್ಛಪ |
| | 11 | ಶೊಲಗಲಾ | ತೊಲಗಲಾ |
| | 24 | ಗೀತಗುವಮ | ಈ ತಗುವಮೆ |
| 159 | 15 | ಸೂರ್ಯವರಾಗವಲಿ | ಸೂರ್ಯೋವರಾಗದಲಿ |
| 169 | 2 | ಪದಾಪಿ | ವದಾಪಿ |
| | 2 | ಮಾಯಾತ | ಮಾಯಶಾತಿ |
| | 10 | ಉತಪೇಕ್ಷ | ಮುಪೇಕ್ಷ್ಯ |
| | | ವಧೂಗ್ವಹಮತೀತ್ಯ | ವಧೂಗ್ರಹಮತೀತ್ಯ |
| 170 | 11 | ಭಾವನೀಪ್ | ಭಾವಿನೀಪ್ |



# ಉಡುಪಿ ಶ್ರೀಕೃಷ್ಣನ ಅಭೂತೋಪಮ ಸ್ತೋತ್ರ

## ಗೋಪಾಲದಾಸರ ಸುಳಾದಿ

ರಾಗ – ಭೈರವಿ ಆದಿತಾಳ

ಆವ ಲೀಲೆಯೊ ನಿನ್ನ ನಾನಾವವರ್ಣಿಪೆ ।
ದೇವ ನಿನ್ನ ನಿಜ ಸ್ವಭಾವ ಗುಣ ।
ಆವ ಜನುಮ ರಹಿತವಾದ ನೀನು ಇನ್ನು ।
ದೇವಕ್ಕಿ ಜಠರದಿ ಜನನವೇನೊ ।
ಆವ ಜಗವೆಲ್ಲ ಬಂಧಕವ ಮಾಡಿಪ್ಪ ಶಕ್ತ ।
ಗೋವತ್ಸ ಹಗ್ಗದಿಂದ ನೀವೀಗ ಸಿಕ್ಕೋದೇನೊ ।
ಆವ ನಿತ್ಯ ತೃಪ್ತನಾದವ ನೀ ಇನ್ನು ಪೋಗಿ ।
ಆವಾವ ಮನೆ ಬೆಣ್ಣೆ ಕದ್ದು ಮೆದ್ದದ್ದೇನು ।
ದೇವ ಸ್ವರಮಣನಾದ ಇನ್ನು ಪೋಗಿ ।
ಆವ ಗೋಪಿಕರೊಡನಾಟವು ಕ್ರೀಡೆಗಳೇನೊ ।
ಶ್ರೀ ವೈಕುಂಠವಾಸವಾಗಿಪ ಅಪ್ರಾಕೃತನೆ ।
ಈ ಉಡುಪಿನಲ್ಲಿ ನೀ ಇಪ್ಪ ಬಗೆಯು ಏನೋ ।
ಗೋವಳರೊಡೆಯ ಗೋಪಾಲವಿಟ್ಠಲರೇಯಾ ।
ನಿವಾಸ ಮಧ್ವಮುನಿ ಮಂದಿರ ಸರ್ವದಾ ॥ ೧ ॥

॥ ಮಟ್ಟತಾಳ ॥

ಮುಕ್ತ ಬೊಮ್ಮಾದಿಗಳು ತುತಿಸೆ ಕಾಣದ ಸರ್ವ ।
ಶಕ್ತರಲ್ಲವೆಂದು ಸಮ್ಮತಿಸುವವೇದ ।
ನೊಕ್ಕಿನಿಂದಲಿ ಗೋಮಕ್ಕಳ ಕೈಯಿಂದ ।
ಭಕ್ತವತ್ಸಲನೆ ಬಯಸಿ (ಬೈಸಿ) ಕೊಂಡದದೇನು ।
ಮುಕ್ತಿ ಪ್ರದಾತನೆ ನಿನಗೆ ಯಮುನಾದೇವಿ ।
ಘಕ್ಕನೆ ಮಾರ್ಗವ ನಿತ್ತಳೆಂಬೊದೇನೊ ।
ಮುಕ್ತನಿಯಾಮಕನೆ ನೀ ಕೌರವ ಸಭೆಗೆ
ಚಕ್ಕನ ಸಂಧಾನಕ್ಕಿನ್ನು ಪೋದುದು ಏನೋ ।
ಭಕ್ತವತ್ಸಲ ಕೃಷ್ಣ ಗೋಪಾಲವಿಟ್ಠಲ ।
ಮಕ್ಕಳಾಟಿಕೆ ನಿನ್ನ ಮಹಿಮೆಗೆ ನಮೋ ನಮೋ ॥ ೨ ॥

## ತಾಳ ತ್ರಿವಿಡಿ

ಅಂಗನೇ ದ್ರೌಪದೀಗಕ್ಷಯ ವಸನವು ।
ಹಿಂಗದೆ ಇತ್ತಂತೆ ಹಿತ ದೈವವೆ ।
ಶೃಂಗಾರಾದೀಪುರದ ರಜಕನ್ನ ಬಿಡದಲೆ
ಭಂಗಬಡಿಸಿ ವಸ್ತ್ರವನುಟ್ಟುಕೊಂಡದ್ದು ಏನೊ ।
ಹಿಂಗದ ಅಜಭವರಿನ್ನು ಅರ್ಚಿಸಲಾಗಿ ।
ಕುಂಗಿದ್ದ ಕುಬುಜೆ ಅರ್ಚನೆಗೆ ಮೆಚ್ಚಿದ್ದೇನೊ ।
ಅಂಗನ ಲಕುಮಿ ಅಲಂಕರಿಸುತಲಿರೆ ।
ರಂಗಪ್ರಾಗಾರನ ಮಾಲೆ ಕೊಂಡದ್ದು ಏನೊ ।
ತುಂಗಮಹಿಮ ಗೋಪಾಲವಿಟ್ಠಲ ಕೃಷ್ಣ ।
ಡಿಂಗರಿಗರ ಪ್ರಿಯ ದೀನಜನರ ಬಂಧು ॥ ೩ ॥

## ॥ ಅಟ್ಟತಾಳ ॥

[illegible] ನಾಗರದ ಸಿಕ್ಕು ಬಿಡಿವನೆ ದೇ ।
ವಕ್ರೆಯ ನೆರಯ ಬಿಡಿಸಿದನೆಂಬುವದೇನೂ ।
ಅಕ್ಕರದಲಿ ವದನ ತೆರೆದು ಇನ್ನು ।
ಫಕ್ಕನೆ ಹದಿನಾಲ್ಕು ಲೋಕತೋರಿದನೆ ಗೋ ।
ಮಕ್ಕಳ ಕೂಡಾಡಿ ಅಡಗಿಕೊಂಬುವದೇನೂ ।
ಮುಖ್ಯಮುಕುತರು ನಿನ್ನನ್ನು ಕೊಂಡಾಡುತ್ತಲಿರೆ ।
ಉಪ್ಪಾ ಅಪ್ಪಾ ಎಂದು ಅಕ್ಕಿ ಮಾಡಿದ್ದೇನೊ ।
ಭಕ್ತವತ್ಸಲದೇವ ಗೋಪಾಲವಿಟ್ಠಲ ವಿ ।
ರಕ್ತರ ಮನದಲ್ಲಿ ಬಿಡದೆ ಇಪ್ಪಸ್ವಾಮಿ ॥ ೪ ॥

## ॥ ಆದಿತಾಳ ॥

ಜಾರ ಚೋರ ದೋಷಗಳು ಆರು ಆರು ಮಾಡಿ ನಿನ್ನ ।
ನಾರಿ ತುತಿಸಿ ನಾರೆ ಅಪರಾಪಾರ ಜಡವು ।
ಜಾರ ಚೋರ ಗುಣಗಳೆಲ್ಲ ನಿನಗೆ ಒಪ್ಪಿತಯ್ಯಾ ಸರ್ವ ।
ಕಾರಣಕ್ಕೆ ನೀನೆ ಮುಖ್ಯ ಕಾರಣಾದ ಕಾರಣವು ।
ಮಾರುತೀಶ ಚೆಲುವ ಗೋಪಾಲವಿಠ್ಠಲರೇಯಾ
ಬಿಡದೆ ನಂಬಿನೊ ನಿನ್ನ ಚರಣಕಮಲವ ॥ ೫ ॥

## ॥ ಜತೆ ॥

ಉಡುಪಿನವಾಸ ಶ್ರೀಕೃಷ್ಣ ಗೋಪಾಲವಿಟ್ಠಲ ।
ಬಿಡದೆ ನಂಬಿನೊ ನಿನ್ನ ಚರಣಕಮಲವ ॥ ೬ ॥